ಮಹಾಕವಿ

# ದಂಡಿಯ ಕತೆಗಳು

ಭಾಗ ೧





ವಿದ್ವಾನ್. ಎನ್. ಕೃಷ್ಣಮೂರ್ತಿ, ಬಿ.ಎ.(ಆನರ್ಸ್); ಬಿ.ಒ.ಎಲ್.

ಭಾರತೀಯ ಗ್ರಂಥಮಾಲೆ –

ಮಹಾಕವಿ

# ದಂಡಿಯ ಕತೆಗಳು

( ಭಾಗ ೧ )

**ವಿದ್ವಾನ್. ಎನ್. ಕೃಷ್ಣಮೂರ್ತಿ,** ಬಿ.ಎ. (ಆನರ್ಸ್), ಬಿ.ಓ.ಎಲ್.
ಸಂಸ್ಕೃತ ಅಸಿಸ್ಟೆಂಟ್ ಪ್ರೊಫೆಸರ್
ಚಾಮರಾಜೇಂದ್ರ ಕಾಲೇಜು, ಬೆಂಗಳೂರು

ಪ್ರಕಾಶಕರು :
**ಭಾರತೀಯ ಅಂಡ್ ಕೊ**
" ಭಾರತೀಯ ಭವನ "
ರಾಘವೇಂದ್ರಕಾಲೊನಿ .. ಬೆಂಗಳೂರು 2.

# ಮುನ್ನುಡಿ

ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯುವುದು ನನಗೆ ಬಹಳ ಸಂತೋಷಕರವಾದ ಕಾರ್ಯವೆನ್ನಲು ಸಂದೇಹವೇ ಇಲ್ಲ. ಸಂಸ್ಕೃತ ಸಾಹಿತ್ಯದಲ್ಲಿ ಬೆಳಗುತ್ತಿರುವ ಅನೇಕ ಗ್ರಂಥಗಳು ಕನ್ನಡಕ್ಕೆ ಅನುವಾದವಾಗಿ ಅಥವಾ ಭಾಷಾಂತರವಾಗಿ ತನ್ಮೂಲಕ ಕನ್ನಡ ಸಾಹಿತ್ಯವು ಇತೋಽಪ್ಯಧಿಕವಾಗಿ ವೃದ್ಧಿಹೊಂದುವುದು ಅಗತ್ಯವಾಗಿದೆ. ಇಂಗ್ಲಿಷ್ ಭಾಷೆಯೂ ಮತ್ತು ಇಂಗ್ಲಿಷ್ ಸಾಹಿತ್ಯವೂ ಇಂದು ವಿಶೇಷವಾಗಿ ಅಭಿವೃದ್ಧಿ ಸ್ಥಿತಿಗೆ ಬಂದಿರುವುದಕ್ಕೆ ಇಂಗ್ಲಿಷ್ ಸಾಹಿತ್ಯವು ಪ್ರಪಂಚದ ಅನೇಕ ಸಾಹಿತ್ಯಗಳ ಸಾರವನ್ನು ಹೀರುವುದೂ ಒಂದು ಮುಖ್ಯಕಾರಣವೆಂಬುದನ್ನು ನಾವು ಮರೆಯುವಂತಿಲ್ಲ. ಕನ್ನಡ ಸಾಹಿತ್ಯವು ವೃದ್ಧಿಹೊಂದಬೇಕಾದರೂ ಅದೇ ಮಾರ್ಗವನ್ನು ಅನುಸರಿಸಬೇಕಾದುದು ತೀರ ಅವಶ್ಯವೆಂದು ಧಾರಾಳವಾಗಿ ಹೇಳಬಹುದು. ಈ ದೃಷ್ಟಿಯಿಂದ ನೋಡಿದರೆ, ಗ್ರಂಥಕರ್ತರು "ಮಹಾಕವಿ ದಂಡಿಯ ಕತೆಗಳು' ಎಂಬ ಈ ಪುಸ್ತಕವನ್ನು ಬರೆದಿರುವುದು ದೊಡ್ಡದೊಂದು ಸಾಹಿತ್ಯ ಸೇವೆಯೆಂದು ಹೇಳಲು ಅಡ್ಡಿಯಿಲ್ಲ

ಈ ಗ್ರಂಥವನ್ನು ಬರೆದಿರುವ ಶ್ರೀ ಎನ್ ಕೃಷ್ಣಮೂರ್ತಿ, ಬಿ. ಎ. (ಆನರ್ಸ್), ಬಿ. ಓ ಎಲ್., ಅವರು ದೊಡ್ಡ ವಿದ್ವಾಂಸರು. ಅವರು ನವೀನ ನ್ಯಾಯ, ಪ್ರಾಚೀನ ನ್ಯಾಯ, ವ್ಯಾಕರಣ ಮತ್ತು ಸಾಹಿತ್ಯ – ಇವುಗಳಲ್ಲಿ ವಿದ್ವತ್ಪರೀಕ್ಷೆ ಮಾಡಿರುವುದರ ಜೊತೆಗೆ "ಬಿ. ಎ. (ಆನರ್ಸ್)" ಮತ್ತು "ಬಿ. ಓ. ಎಲ್" ಡಿಗ್ರಿ ಪರೀಕ್ಷೆಗಳಲ್ಲಿಯೂ ತೇರ್ಗಡೆಹೊಂದಿದ್ದಾರೆ, ಬೆಂಗಳೂರಿನಲ್ಲಿರುವ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಸಂಸ್ಕೃತ ಅಸಿಸ್ಟೆಂಟ್ ಪ್ರೊಫೆಸರ್ ಹುದ್ದೆಯಲ್ಲಿದ್ದಾರೆ. ದಂಡಿ ಮಹಾಕವಿಯು ರಚಿಸಿರುವ ದಶಕುಮಾರ ಚರಿತ್ರದ ಐದು ಕಥೆಗಳನ್ನು ಅವರು ಈ ಗ್ರಂಥದಲ್ಲಿ ಉತ್ತಮ ರೀತಿಯಲ್ಲಿ ಅನುವಾದ ಮಾಡಿದ್ದಾರೆ. ಉಳಿದ ಐದು ಕಥೆಗಳನ್ನು

ಈ ಗ್ರಂಥದ ಎರಡನೆಯ ಭಾಗವಾಗಿ ಪ್ರಕಟಿಸಬೇಕೆಂದಿದ್ದಾರೆ. ಒಂದನೆಯ ಭಾಗವಾದ ಈ ಗ್ರಂಥವನ್ನು ಓದಿದವರೆಲ್ಲರೂ ಎರಡನೆಯ ಭಾಗವನ್ನು ಆದರ ದಿಂದ ನಿರೀಕ್ಷಿಸುವರೆಂಬುದರಲ್ಲಿ ಸಂದೇಹವಿಲ್ಲ. ಶ್ರೀ ಎನ್. ಕೃಷ್ಣಮೂರ್ತಿ ಯವರು ಈ ಗ್ರಂಥದಲ್ಲಿರುವ ಐದು ಕಥೆಗಳನ್ನೂ ಬಹಳ ಚೆನ್ನಾಗಿ ಕನ್ನಡಕ್ಕೆ ಅನುವಾದ ಮಾಡಿರುವುದೇ ಅದಕ್ಕೆ ಕಾರಣ. ಅವರು ಇನ್ನೂ ಅನೇಕ ಉತ್ತಮಗ್ರಂಥಗಳನ್ನು ರಚಿಸಿ ಕನ್ನಡ ಸಾಹಿತ್ಯಕ್ಕೆ ಚಿರಕಾಲ ಸೇವೆಯನ್ನು ಸಲ್ಲಿಸುವಂತೆ ಅವರಿಗೆ ಪ್ರೋತ್ಸಾಹವು ಲಭಿಸಲೆಂಬುದೇ ನನ್ನ ಹಾರೈಕೆ.

ಬೆಂಗಳೂರು
೨೬-೯-೧೯೫೦

**ಸಿ. ಕೆ. ವೆಂಕಟರಾಮಯ್ಯ.**

# ಅರಿಕೆ

ಎಲ್ಲ ದೇಶಗಳಲ್ಲೂ ಎಲ್ಲ ಕಾಲಗಳಲ್ಲೂ ಕಿರುಗತೆಗಳಿಗೆ ಉಚಿತವಾದ ಉತ್ತೇಜನ ಉಂಟು. ಮನೋರಂಜಕವಾದ ಲೌಕಿಕಕಿರುಗತೆಗಳ ಜನರ ಆದರಕ್ಕೆ ಪಾತ್ರವಾಗಿದ್ದುವೆಂಬುದಕ್ಕೆ ಕಥಾಸರಿತ್ಸಾಗರವೇ ಉದಾಹರಣೆ. ಆಚಾರ್ಯದಂಡಿಯೂ ಈ ಗ್ರಂಥದ ಆಧಾರದಮೇಲೆ ಹತ್ತುಕತೆಗಳನ್ನು ಬರೆದು 'ದಶಕುಮಾರ ಚರಿತಮ್' ಎಂದು ಹೆಸರಿಟ್ಟಿದ್ದಾನೆ. ಆ ಕತೆಗಳು ಆಕಾಲವಲ್ಲಿ ಜನರನ್ನು ಮೋಹಗೊಳಿಸಿದ್ದುವೆಂದು ನಾವು ತಿಳಿಯಬಹುದಾಗಿದೆ.

ಈಗಲೂ ಮಕ್ಕಳಿಗೆ ಅದ್ಭುತ ರಸಪ್ರಧಾನವಾದ ವೀರರ ಕತೆಗಳಲ್ಲಿ ಆಸಕ್ತಿ ಹೆಚ್ಚು. ಆದ್ದರಿಂದ ಮಕ್ಕಳ ನೆಪದಲ್ಲಿ ಕನ್ನಡಿಗರಿಗೆ ದಂಡಿಯ ಕಥಾಸಂವಿಧಾನ ಚಾತುರ್ಯವನ್ನು ತಿಳಿಸಬೇಕೆಂದು ಈ ಪ್ರಯತ್ನಮಾಡಿದ್ದೇನೆ. ದಂಡಿಯು ಕಟ್ಟಿದ್ದ ಪೂಮಾಲೆಯನ್ನು ಬಿಡಿಸಿ ಅದೇ ಹೂಗಳನ್ನೇ ಉಪಯೋಗಿಸಿಕೊಂಡು ಹೊಸರೀತಿಯಲ್ಲಿ ಮಾಲೆಯನ್ನು ರಚಿಸಿದ್ದೇನೆ. ಈ ಸಂವಿಧಾನಕ್ಕೆ ತಕ್ಕಂತೆ ಬಾಡಿದ ಅಥವಾ ಬೇಡದ ದಳಗಳನ್ನು ತೆಗೆದು ಹಾಕಿದ್ದೇನೆ. ಮೊಗ್ಗುಗಳನ್ನು ವಿಕಾಸಗೊಳಿಸಿದ್ದೇನೆ. ವಿಷಯ ದಂಡಿಯದು; ರಚನೆ ನನ್ನದು. ಇದರಿಂದ ಸಂಸ್ಕೃತ ಗದ್ಯ ಸಾಹಿತ್ಯ ಪ್ರವರ್ತಕನಾದ ಆಚಾರ್ಯ ದಂಡಿಯ ಅಲ್ಪ ಪರಿಚಯವಾದರೂ ಕನ್ನಡಿಗರಿಗೆ ಆಗುವುದಾದರೆ ನಾನು ಧನ್ಯ.

ಕರಡು ಪ್ರತಿಯನ್ನು ನೋಡಿ ಸೂಕ್ತಸಲಹೆಗಳನ್ನಿತ್ತ ನನ್ನ ಗುರುಗಳಾದ ವಿದ್ವಾನ್ ಕೆ. ನರಸಿಂಹಾಚಾರ್ಯರವರಿಗೂ, ನನ್ನ ಪ್ರಾರ್ಥನೆಯನ್ನು ಮನ್ನಿಸಿ ಮುನ್ನುಡಿ ಬರೆದು ಹರಸಿದ ಹಿರಿಯ ಸಾಹಿತಿಗಳಾದ ರಾಜಸೇವಾಸಕ್ತ ಶ್ರೀಮಾನ್. ಸಿ. ಕೆ. ವೆಂಕಟರಾಮಯ್ಯ ಎಂ. ಎ., ಎಲ್. ಎಲ್. ಬಿ. ಯವರಿಗೂ ನಾನು ಚಿರಋಣಿ.

ಬೆಂಗಳೂರು
೧೮-೯-೧೯೫೦

**ನಂ. ಕೃಷ್ಣಮೂರ್ತಿ**

## ಪರಿವಿಡಿ

# ರಾಜವಾಹನ

## ೧

" ಮುನಿವರ! ದೇಶಸಂಚಾರ ಮಾಡುತ್ತಿದ್ದ ನೀನು ಎಷ್ಟೋ ವಿಷಯ ಗಳನ್ನು ಸಂಗ್ರಹಿಸಿರಬೇಕು!"

" ಸಂಗ್ರಹಿಸದೆ ಉಂಟೇ ?"

" ನಿನ್ನ ಈ ವೇಷವು ಯಾರಿಗೂ ಸಂದೇಹವನ್ನುಂಟುಮಾಡಲಿಲ್ಲ ವಷ್ಟೆ ?"

" ಅದಕ್ಕಾಗಿಯೇ ಈ ನಿರ್ದೋಷವಾದ ವೇಷವನ್ನು ಧರಿಸಿದ್ದು."

" ಸಂಗ್ರಹಿಸಿದ ಮುಖ್ಯ ಸಂಗತಿಗಳನ್ನು ಸಂಕ್ಷೇಪವಾಗಿ ತಿಳಿಸು."

" ಬಹು ಮುಖ್ಯವಾದ ಒಂದೇ ಒಂದು ಸಂಗತಿಯುಂಟು."

" ಏನದು ?"

" ತಮ್ಮ ಅಪ್ಪಣೆಯಂತೆ ನಾನು ಅಲ್ಲಿ ಇಲ್ಲಿ ಸುತ್ತುತ್ತ ಮಾಳವ ದೇಶವನ್ನು ಸೇರಿದೆನು.

" ಅಲ್ಲಿನ ಸಮಾಚಾರವೇ ನನಗೂ ಬೇಕಾಗಿದ್ದುದು."

" ಹಿಂದಿನ ಘೋರ ಯುದ್ಧದಲ್ಲಿ ಕೈಸೆರೆ ಸಿಕ್ಕಿದ್ದ ಮಾನಸಾರನನ್ನು ತಾವು ಕನಿಕರದಿಂದ ಜೀವದಿಂದ ಉಳಿಸಿದಿರಲ್ಲವೇ! ಮಾಳವ ದೇಶಾಧಿ ಪತಿಯಾದ ಆ ಮಾನಸಾರನು ಕುಪಿತನಾಗಿ ಈಗ ತಮ್ಮನ್ನು ಜಯಿಸ ಬೇಕೆಂದು ಪ್ರಯತ್ನಿಸುತ್ತಿರುವನು."

" ಹಿಂದಿನ ಪಾಠವನ್ನೇ ಮತ್ತೆ ಕಲಿಯುವನು."

" ಇಲ್ಲ, ಪ್ರಭು! ಈ ಸಲ ಅವನು ತನ್ನ ಬಾಹುಬಲದಲ್ಲ ಒಯಿ ವಿಶ್ವಾಸದಿಂದಿರುವನು."

" ನಮ್ಮ ಕತ್ತಿಯ ರುಚಿಯನ್ನು ಅವನು ಸಂಪೂರ್ಣವಾಗಿ ತಿಳಿಯಲಿಲ್ಲ ವೆಂದು ತೋರುತ್ತದೆ."

"ತಮ್ಮ ಕತ್ತಿಗಿಂತ ನೂರ್ಮಡಿ ಸಮರ್ಥವಾದ ಭಯಂಕರ ಗದೆಯನ್ನವನು ಸಂಪಾದಿಸಿರುವನು."

"ಅಂತಹ ಗದೆ ಅವನಿಗೆ ಹೇಗೆ ದೊರೆಯಿತು ?"

"ಅವನ ತಪಸ್ಸಿಗೊಲಿದ ಮಹಾಕಾಲೇಶ್ವರನು ಮಹಾವೀರನಾದ ಶತ್ರುವನ್ನು ಕೊಲ್ಲಲು ಸಹಾಯವಾಗುವಂತೆ ಅದನ್ನು ದಯಪಾಲಿಸಿರುವನು."

ಗೂಢಚಾರನ ಈ ಮಾತನ್ನು ಕೇಳಿ ರಾಜಹಂಸನ ಮನಸ್ಸು ಸ್ವಲ್ಪ ಮಟ್ಟಿಗೆ ಕ್ಷೋಭೆಗೀಡಾಯಿತು. ಅವನು ಗೂಢಚಾರನನ್ನು ಬಹುಮಾನಿಸಿ ಕಳುಹಿಸಿಕೊಟ್ಟನು. ಮಂತ್ರಿಗಳನ್ನು ಬರಮಾಡಿ ಅವರೊಡನೆ ಆಲೋಚಿಸಿದನು. ದೈವ ಸಹಾಯವುಳ್ಳ ಮಾನಸಾರನನ್ನು ಗೆಲ್ಲುವುದು ಸುಲಭವಲ್ಲವೆಂದು ಮಂತ್ರಿಗಳು ಹೇಳಿದರು. ಅವರ ಮಾತು ಅವನಿಗೆ ಸರಿತೋರಲಿಲ್ಲ. ಯುದ್ಧವೇ ಸಿದ್ಧಮಂತ್ರವೆಂದವನು ತೀರ್ಮಾನಿಸಿದನು. ರಾಜನ ಅಸಹಾಯ ಶೌರ್ಯಕ್ಕೆ ತಲೆದೂಗಿದ ಮಂತ್ರಿಗಳು ಅವನ ಅವಿಮರ್ಶೆಗಾಗಿ ತಲ್ಲಣಿಸಿದರು. ಜೋಡವ ಮನಸ್ಸಿನಿಂದ ರಾಜನ ನಿಶ್ಚಯವನ್ನು ಒಪ್ಪಿದರು.

ಮುಂಬರುವ ಆಪತ್ತನ್ನು ಮೊದಲೇ ಊಹಿಸಿದ ಮಂತ್ರಿಗಳು ಗರ್ಭಿಣಿಯಾದ ರಾಣಿ ವಸುಮತಿಯನ್ನು ರಕ್ಷಿಸಲು ಪ್ರಯತ್ನಪಟ್ಟರು. ಶತ್ರುಗಳು ಹೊಗಲಾಗದ ವಿಂಧ್ಯಾರಣ್ಯದಲ್ಲೊಂದೆಡೆ ಮೂಲಬಲದ ಕಾಪಿನಲ್ಲಿ ರಾಣಿಯನ್ನು ರಕ್ಷಿಸಿದರು. ಆತ್ಮವಿಶ್ವಾಸದಲ್ಲಿ ಸಂದೇಹವೇ ಇಲ್ಲದಿದ್ದ ರಾಜನಿಗೆ ಇದು ಇಷ್ಟವಿರಲಿಲ್ಲ. ಆದರೂ ಮಂತ್ರಿಗಳದನ್ನು ತಮ್ಮ ಪವಿತ್ರ ಕರ್ತವ್ಯವೆಂದು ಸಾಧಿಸಿದ್ದರು.

ವೈರ ಬೆಳೆದ ಮಾಲವ ಮಗಧರಾಜರು ಭಯಂಕರ ಯುದ್ಧದಲ್ಲಿ ತೊಡಗಿದರು. ಬಲಿಷ್ಠರಾದ ಮಗಧರಾಜನ ಸೈನಿಕರು ದೈವಸಹಾಯವಿಲ್ಲದಿದ್ದುದರಿಂದ ಮಾಲವರಾಜನ ಸೈನಿಕರ ಆಯುಧಗಳಿಗೆ ಬಲಿಯಾದರು. ವಿಧಿಯನ್ನು ಮೀರುವವರಾರು ? ಮಹೇಶ್ವರನು ಅನುಗ್ರಹಿಸಿದ್ದ ಮಾನಸಾರನ ಗದಾಯುಧಕ್ಕೆ ಮಗಧರಾಜನೆ ಸಾರಥಿ ತುತ್ತಾದನು. ರಾಜನು ತಾನೇ ರಥವನ್ನು ನಡೆಸಿಕೊಂಡು ಯುದ್ಧಮಾಡುವುದೆಂದು ನಿಶ್ಚಯಿಸಿದನು. ಅಷ್ಟರಲ್ಲಿ ಮಾನಸಾರನು ಪ್ರಯೋಗಿಸಿದ ಗದೆಯು ಎದೆಗೆ ತಾಗಿತು. ಅವನು ತೇರಿನಲ್ಲಿಯೇ ಮೂರ್ಛೆಬಿದ್ದನು. ಗಾಬರಿಗೊಂಡ ಕುದುರೆಗಳು ತೇರು

ನಡೆಸುವವನಿಲ್ಲದ್ದರಿಂದ ನಾಗಾಲೋಟದಿಂದ ತೇರನ್ನೆಳೆದುಕೊಂಡು ಓಡ ಲಾರಂಭಿಸಿದುವು. ಜಯಹೊಂದಿದ ಮಾನಸಾರನು ಪುಷ್ಪಪುರವನ್ನೇ ರಾಜ ಧಾನಿಯನ್ನಾಗಿ ಮಾಡಿಕೊಂಡನು.

ಗಾಯಗೊಂಡು ನಿಶ್ಚೇತನರಾಗಿದ್ದ ಮಂತ್ರಿಗಳು ಎಚ್ಚತ್ತಕೂಡಲೆ ಸುತ್ತಲೂ ನೋಡಿದರು. ಎತ್ತ ನೋಡಿದರೂ ರಾಜನ ಸುಳಿವೇ ಇರಲಿಲ್ಲ. ಅವರ ಮುಖಗಳು ಬಾಡಿದುವು. ಮುಂದೇನು ಮಾಡಬೇಕೆಂದು ತೋರದೆ ರಾಣಿಯಿದ್ದ ಸ್ಥಳವನ್ನಾದರೂ ಸೇರೋಣವೆಂದು ಹೊರಟರು. ವಿಂಧ್ಯಾ ರಣ್ಯದ ಮಾರ್ಗವಾಗಿ ನಡೆದರು. ಮಂತ್ರಿಗಳು ಮಾತ್ರ ಬಂದದ್ದನ್ನು ನೋಡಿ ರಾಣಿಯು ಗಾಬರಿಯಾದಳು. ಅವರಿಂದ ಎಲ್ಲ ವಿಷಯವನ್ನೂ ತಿಳಿದಳು. ವಸುಮತಿಯು ದಿಕ್ಕುತೋರದೆ ಪತಿಯನ್ನು ಹಿಂಬಾಲಿಸುವುದೇ ಸತಿಯ ಕರ್ತವ್ಯವೆಂದು ತಿಳಿದು ಸಾಯಲುಜ್ಜುಗಿಸಿದಳು.

"ದೇವಿ, ಅರಸನು ಸತ್ತುಹೋಗಿರುವನೆಂದು ನಿರ್ಣಯಿಸುವುದೆಂತು? ಅಲ್ಲದೆ ಜೋಯಿಸರು ಹೇಳಿರುವಂತೆ ಶತ್ರು ಸಂಹಾರಕನೂ ತೇಜಸ್ವಿಯೂ ಚಕ್ರವರ್ತಿಯೂ ಆಗುವ ಮಗನು ನಿನ್ನ ಉದರದಲ್ಲಿರುವನು. ನಿನ್ನ ಪ್ರಾಣ ತ್ಯಾಗದಿಂದ ಮಗಧವಂಶದ ಕೀರ್ತಿಯನ್ನೇ ಹುಟ್ಟದಂತೆ ಮಾಡುವೆಯಲ್ಲವೇ? ಬದುಕಿದ್ದರೆ ಎಂದಾದರೂ ಶುಭವನ್ನು ಕಾಣಬಹುದು. ಈ ಉದ್ಯೋಗ ವನ್ನೀಗ ಸಾಕುಮಾಡು" ಎಂದು ಆಕೆಯನ್ನು ಮಂತ್ರಿಗಳು ಸಮಾಧಾನ ಪಡಿಸಿದರು. ಸಂತೋಷವಿಲ್ಲದ ಮನಸ್ಸಿನಿಂದ ವಸುಮತಿಯು ಒಪ್ಪಿದವಳಂತೆ ಇದ್ದಳು.

ನಡುರಾತ್ರಿ, ಎಲ್ಲರೂ ನಿದ್ರೆಯ ಭರದಿಂದ ಐಹಿಕ ವ್ಯಾಪಾರವನ್ನು ಮರೆತಿದ್ದರು. ಶಾಂತವಾದ ಕಾಡಿನಲ್ಲಿ ಅಶಾಂತಿಯ ಮೂರ್ತಿಯಾದ ರಾಣಿಯು ನಿದ್ರಾಸುಖದಿಂದ ದೂರಳಾಗಿದ್ದಳು. ಬೆಳುದಿಂಗಳಿಂದ ಚಂದ್ರನು ಜಗತ್ತನ್ನು ಬೆಳಗತೊಡಗಿದ್ದನು. ರಾಣಿಯ ಮನಸ್ಸಿನಲ್ಲಿ ಶಾಂತಿಯಿರಲಿಲ್ಲ. ಮಾನಧನ ನೆಂದೆನಿಸಿದ ರಾಜಹಂಸನಾದ ರಾಜಹಂಸನನ್ನು ತೊರೆದು ಜೀವಿಸಿರುವುದೇ? ಅಥವಾ ಪ್ರಾಣಗಳನ್ನು ಕಳೆದುಕೊಂಡು ಪರಲೋಕದಲ್ಲಿಯಾದರೂ ಪತಿಯ ಅವಿಯೋಗವನ್ನು ಸಂಪಾದಿಸಿಕೊಳ್ಳುವುದೇ? ಎಂಬೀ ಆಲೋಚನೆಗಳು ಅವಳ ಮನಸ್ಸಿನಲ್ಲಿ ಮೂಡಿದುವು. ತುಂಬು ಬಸಿರಿನ ಆ ಅರಸಿತಿಯು ಹೊರ

ಕಾಡುತ್ತಿದ್ದ ಹಾಸಿಗೆಯಿಂದೆದ್ದು ಮೆಲ್ಲನೆ ಹೊರಹೊರಟಳು. ಸದ್ದಿಲ್ಲದೆ ಸೈನ್ಯದ ಬೀಡನ್ನು ದಾಟಿದಳು. ನಿರ್ಜನವಾದ ಆ ಪ್ರದೇಶದಲ್ಲಿ ಬೆಳುದಿಂಗಳಲ್ಲಿ ಶಾಂತವಾಗಿಯೂ ಭಯಂಕರವಾಗಿಯೂ ನಿಂತಿದ್ದ ದೊಡ್ಡ ಆಲದ ಮರದ ಬುಡವನ್ನು ಸೇರಿದಳು. ಒಮ್ಮೆಯೇ ಬಸಿರನ್ನೂ ಉಸಿರನ್ನೂ ಕೊನೆಗಾಣಿಸುವುದೇ ಸರಿಯೆಂದು ನಿಶ್ಚಯಿಸಿ ತನ್ನ ಮೇಲುದವನ್ನು ಎತ್ತರದ ಕೊಂಬೆಯೊಂದಕ್ಕೆ ಎಸೆದಳು. ಅದನ್ನು ಹಿಡಿದುಕೊಂಡು ಅದನ್ನೇ ತನ್ನ ಮರಣಸಾಧನವಾಗಿ ಮಾಡಿಕೊಳ್ಳಲೆಳಸಿದಳು. ತುಂಬಿದ ಕಣ್ಣೀರಿನಿಂದ, ಉಕ್ಕಿಬರುತ್ತಿದ್ದ ದುಃಖದಿಂದ ಅವಳು "ಮನ್ಮಥನಂತೆ ಸುಂದರನಾದ ರಾಜನೇ! ಮುಂದಿನ ಜನ್ಮದಲ್ಲಿಯೂ ನೀನೇ ನಲ್ಲನಾಗು ನನಗೆ" ಎಂದು ಕೊನೆಯ ಸಾರಿ ಹೇಳಿದಳು.

ಬಟ್ಟೆಯನ್ನು ಕುತ್ತಿಗೆಗೆ ಬಿಗಿಸಿಕೊಳ್ಳುವಷ್ಟರಲ್ಲಿ "ದೇವಿ ವಸುಮತಿ! ಇಲ್ಲಿ ಬಾ" ಎಂಬ ಚಿರಪರಿಚಿತವಾದ ದನಿಯ ಮಾತುಗಳು ಕೇಳಿಸಿದುವು. ತ್ವರೆಯಿಂದ ರಾಣಿಯು ಆ ದಿಕ್ಕಿಗೆ ಓಡಿದಳು. ಅವಳ ಅಚ್ಚರಿಗೆ ತಕ್ಕಂತೆ ಆಗ ತಾನೇ ಬೆಳುದಿಂಗಳ ಶೈತ್ಯದಿಂದ ಚೇತರಿಸಿಕೊಳ್ಳುತ್ತಿದ್ದ ರಾಜಹಂಸನು ತೇರಿನಲ್ಲಿ ಕಾಣಿಸಿದನು.

ಕಡವರವನೆಡಹಿ ಸಂಧಿಸಿದ ಕಡುಬಡವನಂತೆ ರಾಣಿಯು ಆನಂದ ಸಮುದ್ರದಲ್ಲಿ ಮುಳುಗಿದಳು. ಮಂತ್ರಿಗಳೇ ಮೊದಲಾದ ಪರಿವಾರದವರನ್ನು ಗಟ್ಟಿಯಾಗಿ ಕೂಗಿಕೊಂಡಳು. ಅವರೆಲ್ಲರೂ ಓಡಿಬಂದು ರಾಜನನ್ನು ನೋಡಿ ಆಶ್ಚರ್ಯದಿಂದಲೂ ಸಂತೋಷದಿಂದಲೂ ಹಿಡಿಸದವರಾದರು. ವಿಧಿವಿಲಸಿತವನ್ನು ಕೊಂಡಾಡಿದರು. ಹಣೆಗೆ ಕೈಗಳನ್ನು ಜೋಡಿಸಿ "ಪ್ರಭು! ಇದಲ್ಲವೆ ವಿಧಿಯ ಅನುಕೂಲತೆಯೆಂಬುದು! ಸಾರಥಿ ಇಲ್ಲದ ಕುದುರೆಗಳು ಹಿಡಿತಕ್ಕೆ ಸಿಕ್ಕದೆ ಓಡುತ್ತಾ ಈ ಅರಣ್ಯವನ್ನೇ ಬಂದು ಸೇರಿದುವು. ಇನ್ನೂ ಅವುಗಳ ಬಾಯಲ್ಲಿ ಬುರುಗು ಬರುತ್ತಿದೆ, ನಿಟ್ಟುಸಿರನ್ನು ಬಿಡುತ್ತಿವೆ; ಶ್ರಾಂತವಾದ ಕುದುರೆಗಳು ಮುಂದೆ ಹೋಗಲಾರದೆ ಇಲ್ಲಿಯೇ ನಿಂತುವೆಂದು ತೋರುತ್ತದೆ. ಇದೆಲ್ಲ ನಮ್ಮ ಭಾಗ್ಯೋದಯ!" ಎಂದು ಮನವಾರೆ ಮಾತನಾಡಿದರು.

ಅದಕ್ಕೆ ರಾಜನು "ಮಾಲವನಾಥನು ಎಸೆದ ಗದೆ ನನ್ನ ಎದೆಗೆ ತಾಗಿದ್ದು ಮಾತ್ರ ನನಗೆ ಗೊತ್ತು. ಅದರ ಮೇಲೆ ಏನಾಯಿತೆಂಬುದು

ನನಗರಿವಿಲ್ಲ. ಎಚ್ಚರ ತಪ್ಪಿದ್ದ ನಾನು ಈಗ ತಾನೇ ಈ ತಂಗಾಳಿಯಿಂದ ಚೇತರಿಸಿಕೊಳ್ಳುತ್ತಿದ್ದೇನೆ. ನನಗೆ ಎಚ್ಚರವಾಗುವ ವೇಳೆಗೆ ಸರಿಯಾಗಿ ವಸುಮತಿಯ ದೈನ್ಯಧ್ವನಿಯು ಕಿವಿಗೆಬಿದ್ದಿತು. ಸಂತುಷ್ಟನಾದ ನಾನು ಆಕೆಯನ್ನು ಬರುವಂತೆ ಕರೆದೆನು. ಈ ನಮ್ಮೆಲ್ಲರ ಪುನಸ್ಸಮಾಗಮವು ಕಾಕತಾಳದಂತಿದೆ." ಎಂದು ನೋವಿನಿಂದ ನೊಂದು ನುಡಿದನು. ಮಂತ್ರಿಗಳು ಸಂತೋಷದಿಂದ ರಾಜನನ್ನು ಸಮೀಪದ ಶಿಬಿರಕ್ಕೆ ಕರೆತಂದರು. ಮೈಯಲ್ಲಿ ನೆಟ್ಟಿದ್ದ ಬಾಣಗಳನ್ನು ಕಿತ್ತು ಗಾಯಗಳಿಗೆ ಚಿಕಿತ್ಸೆಮಾಡಿದರು.

ದಿನದಿನಕ್ಕೆ ರಾಜನ ಮುಖದಲ್ಲಿ ಕಳೆಯು ಹೆಚ್ಚುತ್ತ ಬಂದು ಹೊರಗಿನ ವ್ಯಾಧಿ ಮಾಯವಾಯಿತು. ಆದರೆ ಆಧಿಯು ಮಾತ್ರ ಆರಲಿಲ್ಲ. ಕೂತಲ್ಲಿ ನಿಂತಲ್ಲಿ ನಡೆದಲ್ಲಿ ನೋಡಿದಲ್ಲಿ ರಾಜನ ಮನಸ್ಸು ತನ್ನ ಅಪಜಯದ ಕಡೆಗೇ ನೆಳೆಯುತ್ತಿತ್ತು. "ಆಹಾ! ಮಂದಭಾಗ್ಯನಾದ ನನಗೆ ದೈವವು ವಿಮುಖವಾಯಿತೇ! ನನ್ನ ಪೌರುಷಕ್ಕೆ ಧಿಕ್ಕಾರ! ಯಾವ ಶತ್ರುವನ್ನು ಮೊದಲು ಲೀಲಾಜಾಲವಾಗಿ ಗೆದ್ದು ಮರಳಿ ದಯೆಯಿಂದ ರಾಜನನ್ನಾಗಿ ಮಾಡಿದ್ದೆನೋ ಆ ಶತ್ರುವಿನಿಂದಲೇ ಪುತ್ತೆ ಸೋಲಿಗೀಡಾದೆನೇ? ದೈವಬಲವುಳ್ಳ ಹುಲ್ಲು ಕಡ್ಡಿಯೂ ಪರ್ವತವನ್ನು ಜಯಿಸುವುದಲ್ಲವೇ! ಈಶ್ವರನ ಕುತ್ತಿಗೆಯನ್ನು ಆಶ್ರಯಿಸಿದ ಹಾವು ಗರುಡನನ್ನು ಕುಶಲಪ್ರಶ್ನೆ ಮಾಡಿತಂತೆ! ಮಾಡದೆ ಏನು? ಮನುಷ್ಯ ಪ್ರಯತ್ನವೆಲ್ಲ ಒಂದೆಡೆ, ದೈವ ಬಲವೇ ಒಂದೆಡೆ. ರಾಜ್ಯವಿಲ್ಲದ ಈ ಜೀವನದಿಂದೇನು?" ಮುಂತಾದ ಆಲೋಚನೆಗಳು ಅಲೆಗಳಂತೆ ಮೇಲೆ ಮೇಲೆ ಉಕ್ಕಿಬಂದು ಶಾಂತವಾಗಿದ್ದ ಮಗಧರಾಜನ ಮನಸ್ಸೆಂಬ ಸಮುದ್ರವನ್ನು ಅಲ್ಲಕಲ್ಲೋಲಗೊಳಿಸುತ್ತಿದ್ದುವು. ರಾಜನ ಈ ಪರಿಸ್ಥಿತಿಯನ್ನರಿತ ಅಮಾತ್ಯರು ತಮ್ಮ ಬುದ್ಧಿವಂತಿಕೆಯನ್ನೆಲ್ಲ ಉಪಯೋಗಿಸಿ ಎಷ್ಟೋ ಬಾರಿ ಸಮಾಧಾನ ಹೇಳಿದರು. ಆದರೂ ಅರಸನ ನೊಂದ ಮನಸ್ಸಿನ ಮೇಲೆ ಅದರ ಪರಿಣಾಮವೇನೂ ಕಾಣಿಸಲಿಲ್ಲ. ಕೊನೆಗೆ ರಾಣಿಯ ಬಳಿಗೆ ಬಂದು ಆಕೆಯನ್ನೇ ರಾಜನಿಗೆ ಸಮಾಧಾನ ಹೇಳುವಂತೆ ಅವರು ಬೇಡಿಕೊಂಡರು.

ಚದುರೆಯೂ, ಕಲಭಾಷಿಣಿಯೂ ಬುದ್ಧಿಮತಿಯೂ ಆದ ವಸುಮತಿಯು ರಾಜನಿಗೆ ನಾನಾ ಬಗೆಯಿಂದ ಸಮಾಧಾನ ಹೇಳಿದಳು.

"ನಾಥ! ಸಿರಿಯು ಚಂಚಲವೆಂಬುದಕ್ಕೆ ಇದಕ್ಕಿಂತ ಬೇರೆ ಉದಾಹರಣೆಬೇಕೇ? ಸಮಸ್ತ ರಾಜಕುಲದಲ್ಲಿ ಶ್ರೇಷ್ಠನೂ ಬಲಿಷ್ಠನೂ ಆದ ನೀನು ಅಲ್ಪನಾದ ಶತ್ರುವಿನ ಕೈಯಲ್ಲಿ ನೊಂದು ಈ ಗೊಂಡಾರಣ್ಯದಲ್ಲಿ ಕಾಲ ತಳ್ಳುತ್ತಿರುವೆಯಲ್ಲವೇ? ಸಂಪತ್ತು ನೀರ ಮೇಲಣ ಗುಳ್ಳೆಯಂತೆ! ಅದರ ಪ್ರಕಾಶವೂ ಕ್ಷಣಕಾಲ. ಮಿಂಚ ಬಳ್ಳಿಯು ಹವ್ವನೆ ತೋರಿ ಹಾರುವುದಲ್ಲವೇ? ಅಂತೆಯೇ ಸಂಪಲ್ಲತೆ. ಇದರಿಂದಲೇ ತಿಳಿಯಬಹುದು ಎಲ್ಲವೂ ದೈವಾಧೀನವೆಂದು. ನಿನಗೆ ತಿಳಿಯದುದೇನು? ಐಶ್ವರ್ಯದಲ್ಲಿ ಮಹೇಂದ್ರನನ್ನು ಮೀರಿಸಿದ ರಾಮಚಂದ್ರ ಹರಿಶ್ಚಂದ್ರ ಮುಂತಾದ ರಾಜರು ದುಃಖವನ್ನು ಅನುಭವಿಸಲಿಲ್ಲವೇ? ಅವರ ದುಃಖಕ್ಕೆ ಅವರು ಯಾವ ವಿಧದಿಂದಲಾದರೂ ಕಾರಣರೇ? ಗಂಡ ಹೆಂಡಿರ ಜಗಳದಲ್ಲಿ ಕೂಸು ನುಗ್ಗಾಯಿತು ಎಂಬಂತೆ ದಶರಥ ಕೈಕೇಯಿಯರಿಗಾಗಿ ರಾಮನು ಕಾಡುಪಾಲಾದನಲ್ಲವೇ? ಕೋಣಗಳೆರಡರ ತಿಕ್ಕಾಟಕ್ಕೆ ಸಿಕ್ಕಿ ಮರವು ನುಚ್ಚುನೂರಾದಂತೆ ವಸಿಷ್ಠ ವಿಶ್ವಾಮಿತ್ರರಿಗಾಗಿ ಹರಿಶ್ಚಂದ್ರನು ರಾಜ್ಯಭ್ರಷ್ಟನಾಗಿ ಸತಿಸುತ ಆತ್ಮಗಳನ್ನು ವಿಕ್ರಯಿಸಿಕೊಂಡು ಕಷ್ಟಪಟ್ಟನಲ್ಲವೇ? ಇಂತಹ ದೊರೆಗಳು ಎಷ್ಟೋ ಮಂದಿ ಇದ್ದಾರೆ. ಕಷ್ಟ ಕೆಲವು ಕಾಲ, ಸುಖ ಕೆಲವು ಕಾಲ. ದೈವಿಕವಾಗಿ ಬಂದೊದಗಿದ ಆ ದುಃಖವನ್ನು ಸಂಪೂರ್ಣವಾಗಿ ಅನುಭವಿಸಿ ಆ ರಾಜರು ಕೊನೆಯಲ್ಲಿ ಬಹುಕಾಲ ರಾಜ್ಯವನ್ನಾಳಿ ಸುಖಪಡಲಿಲ್ಲವೇ? ದುಃಖದ ಅರಿವಿಲ್ಲದಿದ್ದರೆ ಸುಖದ ಹಿರಿಮೆಯಾದರೂ ತಿಳಿಯುವುದೆಂತು? ತಾನು ಕೊಡುವ ಸುಖದ ಸೊಬಗನ್ನು ನೂರ್ಮಡಿಯಾಗಿ ಅನುಭವಿಸಲೆಂದೇ ದೈವವು ಕಷ್ಟವನ್ನು ಮಧ್ಯೆ ತಂದೊಡ್ಡುವುದು. ದೈವಧಿಕ್ಕೃತವಾದ ಪೌರುಷಕ್ಕೆ ನೊಂದು ಫಲವೇನು? ಕೊಂಚಕಾಲ ಮಾತ್ರ ದೈವದಲ್ಲಿ ನಂಬಿಕೆಯಿಟ್ಟು ಮನೋವ್ಯಥೆಯನ್ನು ದೂರಮಾಡು. ನೀನೂ ರಾಜ್ಯವನ್ನಾಳಿ ಸುಖಪಡುವ ಕಾಲ ಬಂದೇ ಬರುವುದು. ಅನುಕೂಲರಾದ ಪರಿಜನರ ಮಧ್ಯದಲ್ಲಿರುವ ನಿನಗೆ ಅರಣ್ಯವೇನು ಅರಮನೆಯೇನು?" ರಾಣಿಯು ಹೇಳಿದ ಸಮಾಧಾನವನ್ನು ರಾಜನು ಮನಸ್ಸಿಗೆ ತಂದುಕೊಂಡು ಸಮಾಧಾನ ಚಿತ್ತನಾಗಿದ್ದನು.

೨

ವಾಮದೇವ ಮಹರ್ಷಿಗಳ ಆಶ್ರಮದಲ್ಲಿ ಆ ದಿನದ ಸಂಭ್ರಮವೇ ಸಂಭ್ರಮ. ಎಲ್ಲ ಋಷಿಗಳೂ, ಋಷಿಕುಮಾರರೂ, ಋಷಿಕನ್ಯೆಯರೂ ತಂಡತಂಡವಾಗಿ ಆಶ್ರಮಕ್ಕೆ ಬರುತ್ತಿದ್ದರು. ಪುರೋಹಿತರು ಆಗಲೇ ನಾಮ ಕರಣಕ್ಕೆ ಬೇಕಾದ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡಿದ್ದರು. ಮಹರ್ಷಿ ಗಳು ಅರಸನೊಡನೆ ಮಾತನಾಡಿಕೊಂಡು ಬರುತ್ತಿದ್ದರು.

"ರಾಜಹಂಸ! ಆ ದಿನ ನೀನು ಕೇಳಿದ ಆಕಾಶವಾಣಿಯು ಇಂದು ಅನುಭವಕ್ಕೆ ಬಂದಿತಲ್ಲವೇ ?"

"ತಪಸ್ವಿಗಳಾದ ತಮ್ಮ ಮಾತಿಗಿಂತಲೂ ಆಕಾಶವಾಣಿಯು ಹಿರಿದೇ ?"

"ಹೀಗೆ ಅನಾಯಾಸವಾಗಿ ರಾಜ್ಯ ಸಂಪಾದಿಸುವುದನ್ನು ಬಿಟ್ಟು ತಪಸ್ಸು ಮಾಡಬೇಕೆಂದಿದ್ದೆಯಲ್ಲಾ !"

"ಮಾನಸಾರನು ದೈವಬಲದಿಂದ ನನ್ನನ್ನು ಸೋಲಿಸಿದನು. ತಪಸ್ಸಿ ನಿಂದ ತಮ್ಮನ್ನಾರಾಧಿಸಿ ನಾನೂ ಅದೇ ದೈವಬಲವನ್ನು ಸಂಪಾದಿಸ ಲೆಳಸಿದೆನು."

"ಮಹೇಶ್ವರನು ಅನುಗ್ರಹಿಸಿದ ಗದಾಯುಧದಿಂದ ಅವನು ನಿನ್ನನ್ನು ಗೆದ್ದನಲ್ಲವೇ ? ಅವನನ್ನೇ ಏನು ? ತ್ರಿಲೋಕವನ್ನೂ ನೀನು ನಿನ್ನ ಕುಮಾರ ನಿಂದ ಗೆಲ್ಲುವೆಯೆಂದು ನಾನು ಅಂದೇ ನಿನಗೆ ಭವಿಷ್ಯವನ್ನು ನುಡಿದೆನು."

"ಎಲ್ಲಿಯೂ ನನ್ನ ಮನಸ್ಸಿಗೆ ಶಾಂತಿ ಭಿಕ್ಷೆಯು ದೊರೆಯಲಿಲ್ಲ. ಆದ್ದ ರಿಂದ ತಮ್ಮ ಬಳಿ ಬಂದು ಸೇರಿದೆನು. ತಮ್ಮ ಅನುಗ್ರಹದಿಂದ ವಿಜಯವನ್ನು ಹೊಂದುವೆನೆಂಬ ಭರವಸೆ ನನಗಿದೆ."

"ದೈವವು ಅನುಕೂಲವಾದಾಗ ಯಾರಿಂದಲಾದರೂ ಅನುಗ್ರಹ ಮಾಡಿಸಿ ಕೊಟ್ಟೀಕೊಡುವುದು. ದೈವಾನುಕೂಲವೆಂದರೆ ಹೊರಗಿನ ಎಲ್ಲ ಸಾಮಗ್ರಿಗಳನ್ನೂ ಒದಗಿಸುವುದೇ ಹೊರತು ಬೇರೆ ಏನೂ ಅಲ್ಲ. ನಡೆ. ಜಾಗ್ರತೆ ಉತ್ಸವವನ್ನು ನೆರವೇರಿಸೋಣ."

"ಗುರುವರ! ಎಲ್ಲರೂ ಸಿದ್ಧರಾಗಿದ್ದಾರೆ. ನಮ್ಮ ಮಂತ್ರಿವರ್ಗದವ

ರಿಗೂ ಪುತ್ರೋತ್ಸವವಾಗಿರುವುದು. ಎಲ್ಲ ಮಕ್ಕಳಿಗೂ ತಾವೇ ನಾಮಕರಣ ಮಾಡುವುದರಿಂದ ನನ್ನನ್ನು ಅನುಗ್ರಹಿಸಬೇಕು."

ಮಾತು ಮುಗಿಯುವುದರೊಳಗಾಗಿ ಅಲಂಕೃತವಾಗಿದ್ದ ಶಿಬಿರದ ಸಮೀಪಕ್ಕೆ ಅವರಿಬ್ಬರೂ ಬಂದು ಸೇರಿದರು. ಪರಿವಾರದವರು ಅತಿ ಸಂಭ್ರಮದಿಂದ ಅವರನ್ನೇ ಅನುಸರಿಸಿ ಹಿಂದೆ ಬರುತ್ತಿದ್ದರು. ಎಲ್ಲರೂ ಉತ್ಸವ ಮಂಟಪವನ್ನು ಸೇರಿದರು. ಎಲ್ಲ ಲಕ್ಷಣಗಳಿಂದ ಕೂಡಿದ ರಾಜ ಪುತ್ರನಿಗೆ ರಾಜವಾಹನನೆಂದು ಹೆಸರಿಟ್ಟರು ಆ ಮಹರ್ಷಿಗಳು. ತ್ರಿಕಾಲ ಜ್ಞಾನಿಗಳಾದ ಮಹರ್ಷಿಗಳು ಅವರವರ ಯೋಗ್ಯತೆಯನ್ನು ತಿಳಿದು ಮಂತ್ರಿಗಳ ಮಕ್ಕಳಿಗೂ ಅನ್ವರ್ಥ ನಾಮಗಳನ್ನಿಟ್ಟರು. ಉತ್ಸವವು ಮುಗಿದ ಮೇಲೆ ಮಹರ್ಷಿಗಳು ಆಶ್ರಮಕ್ಕೆ ಮರಳಿದರು.

ಬೇರೆ ಬೇರೆ ರೀತಿಯಿಂದ ಬಂದು ಸೇರಿದ ಐವರು ಮಂತ್ರಿಕುಮಾರರೂ ಅಲ್ಲಿದ್ದ ನಾಲ್ವರೂ ರಾಜಪುತ್ರನಾದ ರಾಜವಾಹನನೂ ಸೇರಿ ಹತ್ತು ಕುಮಾರರು ಆ ಆಶ್ರಮದಲ್ಲಿ ಬೆಳೆಯುತ್ತಿದ್ದರು. ಅವರ ಬಾಲಲೀಲೆಗಳನ್ನು ನೋಡಿ ಎಲ್ಲರೂ ತಮ್ಮ ತಮ್ಮ ದುಃಖಗಳನ್ನು ಮರೆತು ಆನಂದದಿಂದಿದ್ದರು.

ಉಚಿತ ವಯಸ್ಸಿನಲ್ಲಿ ರಾಜಪುತ್ರನಿಗೆ ಚೌಲ, ಉಪನಯನ ಮೊದಲಾದ ಸಂಸ್ಕಾರಗಳು ನಡೆದುವು. ಆಯಾ ಶಾಸ್ತ್ರಕಲೆಗಳಲ್ಲಿ ನಿಪುಣ ರಾದ ಆಚಾರ್ಯರುಗಳಿಂದ ಸೂಕ್ಷ್ಮಬುದ್ಧಿಯುಳ್ಳ ರಾಜಪುತ್ರನು ಎಲ್ಲ ಲಿಪಿ, ಭಾಷೆ, ಶಾಸ್ತ್ರ, ಕಲೆಗಳನ್ನು ಕಲಿತನು. ಅವನ ಜ್ಞಾನವು ದೇಹದೊಂದಿಗೆ ಬಳೆಯಿತು. ಯೌವನವಂತನಾದ ಕುಮಾರನನ್ನೂ ಅವನ ಗೆಳೆಯ ಕುಮಾರರನ್ನೂ ಕಂಡು ಅರಸನು ತನ್ನ ಸೋಲಿನ ದುಃಖವನ್ನು ಮರೆತನು. "ಇನ್ನು ಶತ್ರುಗಳು ನನ್ನನ್ನು ಏನು ಮಾಡಿಯಾರು?" ಎಂದು ಹೆಮ್ಮೆ ಪಡುತ್ತಿದ್ದನು.

ಯುವಕನಾದ ರಾಜಕುಮಾರನನ್ನು ಕಂಡ ವಾಮದೇವ ಮಹರ್ಷಿ ಗಳೊಂದು ದಿನ ರಾಜನನ್ನು ಎಚ್ಚರಿಸುತ್ತ ಹೀಗೆಂದು ನುಡಿದರು—"ಭೂ ವಲ್ಲಭ! ನಿನ್ನ ಮನೋರಥದಂತೆ ಇರುವ ತುಂಬು ಜವ್ವನದ ನಿನ್ನ ಮಗನನ್ನು ನೋಡು. ಇದೇ ಇವನ ದಿಗ್ವಿಜಯಕ್ಕೆ ತಕ್ಕ ಕಾಲ. ಇವನ

ವಯಸ್ಸು ಎಲ್ಲ ಕಷ್ಟಗಳನ್ನೂ ಸಹಿಸಬಲ್ಲುದಾಗಿದೆ. ತಡಮಾಡದೆ ಈಗಲೆ ದಿಗ್ವಿಜಯಕ್ಕೆ ಪಯಣಮಾಡಿಸು."

ರಾಜನೂ ಮಹರ್ಷಿಗಳ ಮಾತನ್ನು ಗೌರವಿಸಿ ಮಗನಿಗೆ ತಕ್ಕ ಬುದ್ಧಿವಾದವನ್ನು ಹೇಳಿ ಶುಭಮುಹೂರ್ತದಲ್ಲಿ ಉಚಿತಪರಿವಾರದೊಡನೆ ಯುವರಾಜನನ್ನು ದಿಗ್ವಿಜಯಕ್ಕಾಗಿ ಕಳುಹಿಸಿಕೊಟ್ಟನು.

೩

" ಇದು ಇವನ ಮೃತ್ಯುಸಮಯವಲ್ಲ."

" ಆದರೇನು, ಪ್ರಭು, ಇವನು ಬಹು ಕೆಟ್ಟ ವೃತ್ತಿಯನ್ನವಲಂಬಿಸಿದ್ದ ಬ್ರಾಹ್ಮಣನು. ತನ್ನ ಕುಲಾಚಾರವನ್ನು ಬಿಟ್ಟು ಸತ್ಯದೂರನಾಗಿ ಬೇಡರೊಡನೆ ವಾಸಿಸಿದನು. ಅವರಂತೆ ತಾನೂ ಕೀಳಾದ ಹಿಂಸಾವೃತ್ತಿಯಲ್ಲಿ ಆಸಕ್ತನಾಗಿ ಪಾಪಿಯಾಗಿದ್ದನು. ಇಂತಹ ಬ್ರಾಹ್ಮಣಬ್ರುವರಿಂದ ಭೂಮಿಗೆ ಭಾರವಾಗಿದೆ."

" ಇವನ ಸಾವಿಗೆ ಕಾರಣವೇನು ?"

" ಶ್ರೋತ್ರಿಯನಾದ ಒಬ್ಬ ಬ್ರಾಹ್ಮಣನನ್ನು ಇವನ ಕಡೆಯವರು ಹಿಂಸಿಸುತ್ತಿದ್ದರು. ಅದನ್ನು ತಪ್ಪಿಸಲು ಇವನು ಹೋದನು. ಅವರು ಇವನನ್ನು ಕೊಂದರು."

" ನೀವು ಹೇಳಿದಂತೆ ಇವನೇನೋ ಪಾಪಿಯೇ ಸರಿ. ಆದರೂ ಉತ್ತಮ ಬ್ರಾಹ್ಮಣನಿಗಾಗಿ ಪ್ರಾಣಗಳನ್ನು ಒಪ್ಪಿಸಿರುವನು. ಆದ್ದರಿಂದ ಇವನ ಹಿಂದಿನ ಪಾಪವು ನೀಗಿ ಇವನೀಗ ಪರಿಶುದ್ಧನಾಗಿದ್ದಾನೆ. ಇನ್ನು ಮುಂದೆ ಇವನ ಮನಸ್ಸು ಪಾಪಕಾರ್ಯಗಳಲ್ಲಿ ತೊಡಗುವುದಿಲ್ಲ. ಪುಣ್ಯಕೆಲಸಗಳಲ್ಲಿ ಇವನಿಗೆ ಪ್ರೇಮವುಂಟಾಗುವುದು. ಇಲ್ಲಿನ ನರಕಗಳಲ್ಲಿ ಯಾತನೆಯನ್ನು ಅನುಭವಿಸುವ ಅನೇಕ ಪಾಪಿಗಳನ್ನು ತೋರಿಸಿರಿ. ಪಾಪದ ಫಲವನ್ನು ಕಂಡು ಭಯಗೊಂಡ ಇವನು ಮತ್ತೆ ಬದುಕಲಿ."

ಆಗತಾನೇ ನಿದ್ರೆಯಿಂದ ಎಚ್ಚತ್ತವನಂತೆ ಚೇತರಿಸಿಕೊಂಡು ಮಾತಂಗನು ಏಳುತ್ತಿದ್ದನು. ಅವನ ಕಿವಿಯಲ್ಲಿ ಮೇಲೆ ಹೇಳಿದ ಯಮ –

ಚಿತ್ರಗುಪ್ತರ ಸಂಭಾಷಣೆಯೇ ಪ್ರತಿಧ್ವನಿ ಮಾಡುತ್ತಿತ್ತು. ತಾನು ಕಂಡ ಪ್ರೇತನಗರದ ವೈಭವ, ತನ್ನನ್ನು ಸುತ್ತುವರಿದಿದ್ದ ಯಮದೂತರ ಆಕಾರ, ದೊಡ್ಡ ಸಭೆಯ ನಡುವೆ ರತ್ನಸಿಂಹಾಸನದಲ್ಲಿ ಕುಳಿತಿದ್ದ ಕಾಲನ ಕರಾಳ ವೇಷ, ಚಿತ್ರಗುಪ್ತನು ವಾದಿಸುತ್ತಿದ್ದ ರೀತಿ – ಇವು ಯಾವುವೂ ಅವನ ಮನಸ್ಸನ್ನು ಬಿಟ್ಟು ಕದಲುವಂತಿರಲಿಲ್ಲ. ನರಕಗಳನ್ನು ಅವನಿಗೆ ತೋರಿಸಿ ದಾಗ ಕಂಡ ನೋಟಗಳು ಇನ್ನೂ ಅಳಿಸಿಹೋಗಿರಲಿಲ್ಲ. ಯಾತನಾದೇಹ ವುಳ್ಳ ಪಾಪಿಗಳು ಕಾದಕಬ್ಬಿಣದ ಕಂಬಗಳನ್ನು ಅಪ್ಪಿಕೊಳ್ಳುತ್ತಿದ್ದರು, ಮರಳುವ ಎಣ್ಣೆಕೊಪ್ಪರಿಗೆಗಳಲ್ಲಿ ಬಿದ್ದು ಹೊರಳಾಡುತ್ತಿದ್ದರು. ಬಲವಾದ ದಂಡಾಯುಧದ ಪೆಟ್ಟಿನಿಂದ ಕೆಲವರ ಅವಯವಗಳು ಚೂರುಚೂರಾಗು ತ್ತಿದ್ದುವು. ಚೂಪಾದ ಚಾಣದ ಪೆಟ್ಟಿಗೆ ಸಿಕ್ಕಿ ಕೆಲವರ ದೇಹವೇ ಕೃಶವಾಗು ತ್ತಿತ್ತು, ಕೆಲವರು ನೋವನ್ನು ಸಹಿಸಲಾರದೆ ಕಿರಿಚಿಕೊಳ್ಳುತ್ತ ದಮ್ಮಯ್ಯ! ಇನ್ನು ಮುಂದೆ ಪಾಪಗಳನ್ನು ಮಾಡುವುದಿಲ್ಲವೆಂದು ಕೂಗಿಕೊಳ್ಳುತ್ತಿದ್ದರು— ಇವೆಲ್ಲ ನೆನಪಿಗೆ ಬಂದ ಕೂಡಲೆ ಅವನ ಮೈನವಿರೆದ್ದು ನಡುಗುತ್ತಿತ್ತು. ಪಕ್ಕದಲ್ಲಿ ಕುಳಿತಿದ್ದ ಬ್ರಾಹ್ಮಣನು ಅವನಿಗೆ ಶೈತ್ಯೋಪಚಾರ ಮಾಡುತ್ತಿದ್ದನು. ಮಾತಂಗನಿಗೆ ಏಳಲಾಗುತ್ತಿರಲಿಲ್ಲ. ಬ್ರಾಹ್ಮಣನು ಅವನನ್ನು ಎತ್ತಿತಂದು ಕಲ್ಲ ಮೇಲೆ ಮಲಗಿಸಿ ಉಪಚರಿಸಿದನು. ನೊಂದ ಕಣ್ಣುಗಳಿಂದ ಮಾತಂಗನು ಆ ಶ್ರೋತ್ರಿಯನಿಗೆ ಕೃತಜ್ಞತೆಯನ್ನು ಸೂಚಿಸುತ್ತಿದ್ದನು.

ಪ್ರಪಂಚವು ಒಂದು ನಾಟ್ಯರಂಗ. ಅದರಲ್ಲಿ ವಾಸಿಸುವ ಪುರುಷ ಸತಿಯ ರೆಲ್ಲರೂ ನಟರಿದ್ದಂತೆ. ಒಬ್ಬನೇ ನಟ ಒಂದೊಂದು ವೇಳೆ ಒಂದೊಂದು ಭೂಮಿಕೆಯಿಂದ ರಂಗಭೂಮಿಯ ಮೇಲೆ ಬರುವಂತೆ ಮನುಷ್ಯನೂ ತನ್ನ ಜೀವನದಲ್ಲಿ ಅನೇಕ ಮಾರ್ಪಾಡುಗಳಿಂದ ಬದುಕನ್ನು ಸಾಗಿಸುವನು. ಹೇಗಿದ್ದವನು ಹೇಗಾಗುವನೆಂದು ಹೇಳುವುದು ದುಸ್ಸಾಧ್ಯ. ಅಷ್ಟೊಂದು ಕ್ರೂರಿಯಾಗಿದ್ದ ಮಾತಂಗನು ಉತ್ತಮ ಬ್ರಾಹ್ಮಣನಾದನು. ಪ್ರಾಣರಕ್ಷಿಸಿದ ಆ ಬ್ರಾಹ್ಮಣನಿಂದ ಮತ್ತೆ ಅಕ್ಷರಾಭ್ಯಾಸಮಾಡಿದನು. ಸಮಸ್ತ ಶಾಸ್ತ್ರ ಗಳನ್ನೂ ತಿಳಿದನು. ಸದಾಚಾರಿಯಾಗಿದ್ದುಕೊಂಡು ಪಾಪನಾಶಕನಾದ ಶಶಿಶೇಖರನನ್ನು ಪೂಜಿಸುತ್ತ ಬಂದನು. ಜ್ಞಾನಿಗಳ ಮಾರ್ಗದಲ್ಲಿ ನಡೆದನು. ದುರಾಚಾರಿಗಳಾದ ಬಂಧುವರ್ಗದವರಿಂದ ದೂರವಾಗಿರಲೆಳಸಿ ವಿಂಧ್ಯಾ

ರಣ್ಯದ ಮಧ್ಯದಲ್ಲಿ ಒಬ್ಬನೇ ವಾಸಿಸತೊಡಗಿದನು. ಅವನೇ ಕಟ್ಟಿಕೊಂಡಿದ್ದ ಎಲೆಮನೆಯು ಅವನಿಗೆ ಉಪ್ಪರಿಗೆಯಂತಿದ್ದಿತು. ಚಂದ್ರಶೇಖರನ ಅಡಿದಾವರೆಗಳನ್ನು ಬಿಟ್ಟು ಅವನ ಮನೋದುಂಬಿಯು ಬೇರೊಂದಕ್ಕೆ ಆಶೆಪಡುತ್ತಿರಲಿಲ್ಲ.

ದಿಗ್ವಿಜಯಕ್ಕಾಗಿ ಹೊರಟ ರಾಜಪುತ್ರನು ಪರಿವಾರದವರೊಡನೆ ವಿಂಧ್ಯಾರಣ್ಯ ಮಧ್ಯವನ್ನು ಹೊಕ್ಕನು. ದೂರದಲ್ಲಿ ಪರ್ಣಶಾಲೆಯನ್ನು ಕಂಡನು. ಅಲ್ಲಿ ಯಾರೋ ತಪಸ್ವಿಗಳು ವಾಸಿಸುತ್ತಿರಬಹುದೆಂದು ಊಹಿಸಿದನು. ಮಹನೀಯರನ್ನು ಕಂಡು ಮಾತನಾಡಿ ಗೌರವಿಸಿ ಆಶೀರ್ವಾದ ಪಡೆದುಹೋಗುವುದು ಉಚಿತವೆಂದು ಬಯಸಿದನು. ಆಶ್ರಮದ ಕಡೆಗೆ ನಡೆದನು. ನಿರ್ಜನವಾದ ಈ ಗೊಂಡಾರಣ್ಯದಲ್ಲಿ ಧೈರ್ಯದಿಂದ ವಾಸಿಸಬೇಕಾದರೆ ಜೀವದಾಸೆ ತೊರೆದವರೇ ಇರಬೇಕೆಂದು ಅವನು ನಿಶ್ಚಯಿಸಿದನು. ಮೆಲ್ಲಮೆಲ್ಲಗೆ ಎಲೆಮನೆಯ ಸಮೀಪಕ್ಕೆ ಬರುವ ವೇಳೆಗೆ ತಪಸ್ವಿಯಂತಿದ್ದ ಒಬ್ಬ ಪುರುಷನನ್ನು ಕಂಡನು. ವೇಷವು ತಪಸ್ವಿಯದಾಗಿದ್ದರೂ ಅವನ ಆಕಾರವು ಅದಕ್ಕೆ ವಿರುದ್ಧವಾಗಿತ್ತು. ಕೇವಲ ಯಜ್ಞೋಪವೀತದಿಂದ ಅವನನ್ನು ಬ್ರಾಹ್ಮಣನೆಂದು ತಿಳಿಯಬಹುದಾಗಿತ್ತು. ದೇಹದಲ್ಲಿ ಎಲ್ಲಿ ನೋಡಿದರೂ ಆಯುಧದ ಗಾಯಗಳ ಜಡ್ಡು ಕಾಣುತ್ತಿತ್ತು. ಕಣ್ಣಿನಲ್ಲಿ ಕಂಡುಬರುತ್ತಿದ್ದ ಕ್ರೌರ್ಯವು ಕೆಂಪಿನಿಂದ ಇಮ್ಮಡಿಸಿ ಹೊರಸೂಸಿ ಅವನು ಕಿರಾತನೆಂಬುದನ್ನು ತಿಳಿಸಿಕೊಡುತ್ತಿತ್ತು. ದೇಹವು ಕಬ್ಬಿಣದಂತೆ ಕಪ್ಪಗೂ ಕಠಿಣವಾಗಿಯೂ ಇತ್ತು. ರಾಜಪುತ್ರನಿಗೆ ಏನೊಂದು ನಿರ್ಣಯಿಸಲೂ ಸಾಧ್ಯವಿಲ್ಲವಾಯಿತು. ವೇಷಕ್ಕೆ ವಿರುದ್ಧವಾದ ಆಕಾರ, ಆಕಾರಕ್ಕೆ ವಿರುದ್ಧವಾದ ವೇಷ – ಇವನ್ನು ಆಲೋಚಿಸಿ ಅವನು ಮುಗ್ಧನಾಗಿಹೋದನು. ಸ್ನೇಹಿತರ ಕಡೆ ನೋಡಿ ಸನ್ನೆಯಿಂದ ತನ್ನ ಸಂದೇಹವನ್ನು ಸೂಚಿಸಿದನು. ನಮಸ್ಕಾರ ಮಾಡೋಣವೆಂದರೆ ಮನಸ್ಸು ಒಪ್ಪದು. ಮಾಡದೆ ಇರುವುದೆಂದರೆ ತಪಸ್ವಿಗಳಲ್ಲಿ ಅಪಚಾರ ಮಾಡಿದಂತಾಗುವುದೆಂಬ ಭಯ. ಈ ಸಂದೇಹವು ಕ್ಷಣಕಾಲ ರಾಜಪುತ್ರನನ್ನು ದಿಕ್ಕುತೋರದವನನ್ನಾಗಿ ಮಾಡಿತು.

ಸಂದೇಹವನ್ನು ಹೋಗಲಾಡಿಸಿಕೊಳ್ಳಲು ಅವನು ಆ ಪುರುಷನನ್ನೇ ಪ್ರಶ್ನೆಮಾಡಿದನು. ಅವನ ಆಶ್ಚರ್ಯಕ್ಕೆ ತಕ್ಕಂತೆ ಆ ತಪಸ್ವಿಯು ಬಹು ಆದರ

ಮಾಡಿ ಸರಳ ರೀತಿಯಿಂದ ತನ್ನ ಪೂರ್ವ ಕತೆಯೆಲ್ಲವನ್ನೂ ರಾಜಪುತ್ರನಿಗೆ ಹೇಳಿದನು. ಅವನ ಮೊದಲ ಬದುಕಿನ ರೀತಿಯನ್ನೂ, ಅವನಿಗೆ ವೈರಾಗ್ಯ ವುಂಟಾಗುವದಕ್ಕೆ ಕಾರಣವನ್ನೂ ತಿಳಿದ ರಾಜಪುತ್ರನು ಬದುಕಿನ ಅಸ್ಥಿರತೆ ಯನ್ನು ಚೆನ್ನಾಗಿ ಮನಗಂಡನು.

ಸ್ವಲ್ಪಹೊತ್ತು ಸುಮ್ಮನಿದ್ದು ಮಾತಂಗನು ರಾಜಪುತ್ರನನ್ನು ಕಾಲಿನಿಂದ ತಲೆಯವರೆಗೂ ನೋಡತೊಡಗಿದನು. ಅವನ ಕಣ್ಣುಗಳು ರಾಜವಾಹನನ ಪ್ರತಿಯೊಂದು ಅವಯವವಲ್ಲಿಯೂ ಕೀಲಿಸಿದಂತೆ ನಿಂತುಬಿಡುತ್ತಿದ್ದುವು. ಅವನು ಮನಸ್ಸಿನಲ್ಲೇ ಏನನ್ನೋ ಗುಣಿಸುತ್ತಿದ್ದನೆಂದು ತುಟಿಯ ಚಲನೆ ಯಿಂದ ತಿಳಿಯಬಹುದಾಗಿತ್ತು. ಒಮ್ಮೆ ಸಂದೇಹಪಡುವಂತೆಯೂ ಒಮ್ಮೆ ನಿಶ್ಚಯಿಸಿಕೊಳ್ಳುತ್ತಿರುವಂತೆಯೂ ಕಾಣುತ್ತಿತ್ತು. ಒಮ್ಮೆ ಪರಿವಾರದ ಕಡೆ ಒಮ್ಮೆ ರಾಜಪುತ್ರನ ಕಡೆ ನೋಡಿ ತಲೆತಗ್ಗಿಸಿ ಆಲೋಚಿಸುತ್ತಿದ್ದನು. ಸ್ವಪ್ನದಲ್ಲಿ ಪಶುಪತಿಯು ತಿಳಿಸಿದ ರಾಜಕುಮಾರನು ಇವನೇ ಇದ್ದಿರ ಬಹುದೇ? ಎಂದವನ ಮನಸ್ಸು ಪ್ರಶ್ನಿಸುತ್ತಿತ್ತು. ನಾಳೆಯೇ ಬರುವನೆಂದು ಈಶ್ವರನು ಸ್ವಪ್ನದಲ್ಲಿ ಹೇಳಿದ್ದನಲ್ಲವೇ? ಇವನೇ ಇದ್ದಿರಬೇಕು. ಈ ನಿರ್ಜನ ವಾದ ಕಾಡಿಗೆ ಮತ್ತ್ಯಾರು ಬರುವರು? ಇವನ ಪರಿವಾರವೇ ಇವನನ್ನು ಅರಗುವರನೆಂದು ತಿಳಿಸುತ್ತದೆ. ನನ್ನ ಮನೋರಥವು ಇಂದು ಫಲೋನ್ಮುಖ ವಾಯಿತು. ಎಂದಾಲೋಚಿಸಿದನು. ಸಂತೋಷವು ಉಕ್ಕಿ ಇಪ್ಪಕ್ಕಿದ್ದಂತೆ ಅವನ ಮುಖದಲ್ಲಿ ಕಿರುನಗೆಯು ಮಿನುಗಿತು. ಚತುರನಾದ ರಾಜಪುತ್ರನು ಇದನ್ನೆಲ್ಲ ಗ್ರಹಿಸದೆ ಹೋಗಲಿಲ್ಲ. ಮಾತಂಗನು ಏನನ್ನೋ ಹೇಳಬಯಸು ತ್ತಿರುವುದೂ, ಒಮ್ಮೆಯೇ ಧೈರ್ಯವಿಲ್ಲದೆ ಹಿಂತೆಗೆಯುತ್ತಿದ್ದುದೂ ರಾಜ ಪುತ್ರನಿಗೆ ಭಾಸವಾಯಿತು. ಇಂಗಿತಜ್ಞನಾದ ರಾಜವಾಹನನು ಸಹಾಯಾಪೇಕ್ಷೆ ಯಿಂದ ಕಾತುರನಾಗಿದ್ದ ತವಸಿಗೆ ತನ್ನ ನೋಟದಿಂದಲೇ ಒಪ್ಪಿಗೆಯನ್ನು ಸೂಚಿಸಿದನು. ಮಾತಂಗನಿಗೆ ಸ್ವಲ್ಪ ಧೈರ್ಯಬಂದಿತು. ಅವನು ಕುಗ್ಗಿದ ಸ್ವರ ದಿಂದ ‘ ರಾಜಪುತ್ರ! ಒಂದು ರಹಸ್ಯವಿದೆ. ದಯೆಯಿಟ್ಟು ನನ್ನನ್ನು ಸ್ವಲ್ಪದೂರ ಹಿಂಬಾಲಿಸುವೆಯಾ?’ ಎಂದು ಪ್ರಾರ್ಥಿಸಿದನು. ವಿಜಯಕ್ಕೆಂದು ಹೊರಟಿದ್ದ ತರುಣ ರಾಜಪುತ್ರನಿಗೆ ಹಾಗೆ ಮಾಡುವುದರಲ್ಲಿ ದೋಷವೇನೂ ಕಂಡುಬರಲಿಲ್ಲ.

ಆದ್ದರಿಂದ ಅವನು ಮುಂದೆ ಏನಾಗುವುದೆಂಬುದನ್ನು ಕೂಡ ಆಲೋಚಿಸದೆ ಋಷಿಯಂತಿದ್ದ ಮಾತಂಗನನ್ನೇ ಹಿಂಬಾಲಿಸಿದನು.

ನಡುರಾತ್ರಿ. ಮುಂದೆ ಮಾತಂಗನೂ ಹಿಂದೆ ರಾಜವಾಹನನೂ ಹೋಗುತ್ತಿದ್ದರು. ಮುಗಿಲಿನ ನಡುವೆ ಆಗಾಗ ಇಣಿಕಿ ನೋಡುತ್ತಿದ್ದ ಚಂದ್ರನ ಕಾಂತಿಯಿಂದ ಮಾತಂಗನು ಸ್ವಲ್ಪಮಟ್ಟಿಗೆ ದಾರಿಯನ್ನು ತಿಳಿಯುತ್ತ ನಡೆದನು. ಹೆಜ್ಜೆಹೆಜ್ಜೆಗೂ ಅವನಿಗೆ ಸಂದೇಹ. ತಾನು ದಾರಿತಪ್ಪಿಬಿಟ್ಟೇನಲ್ಲಾ ಎಂಬ ಭಯ. ಎರಡು ಕಾಲುದಾರಿಗಳು ಕಂಡಕಡೆ ಕ್ಷಣಕಾಲ ನಿಂತು ಆಲೋಚಿಸುತ್ತಿದ್ದನು. ಕೊನೆಗೆ ಹಿಂದೆ ಮುಂದೆ ನೋಡಿ ಇದೇ ಸರಿಯಾದ ದಾರಿ ಇದ್ದಿರಬಹುದೆಂದು ಊಹಿಸಿ ನಿರ್ಣಯಿಸಿಕೊಂಡವನಂತೆ ಒಂದು ದಾರಿಯನ್ನು ಹಿಡಿಯುತ್ತಿದ್ದನು. ಗಹನವಾದ ಅರಣ್ಯದಲ್ಲಿ ಅರ್ಧ ರಾತ್ರಿಯಲ್ಲಿ ಕ್ರೂರ ಮೃಗಗಳ ಕಾಟವೆಂದು ಹೇಳಬೇಕೆ? ಮೃಗಗಳ ಆರ್ಭಟದ ದಿಕ್ಕನ್ನು ನಿಶ್ಚಯಿಸಿ ರಾಜಪುತ್ರನು ಬಾಣವನ್ನು ಪ್ರಯೋಗಿಸುತ್ತಿದ್ದನು. ಮಾತಂಗನ ಮನಸ್ಸಿನಲ್ಲಿ ಕಳವಳ. ಎಷ್ಟು ದೂರ ಬಂದು ನೋಡಿದರೂ ಅವನಿಗೆ ಹೆಗ್ಗುರುತು ಏನೂ ದೊರೆತಂತಿರಲಿಲ್ಲ. ಒಮ್ಮೆ ಕರ್ತವ್ಯಮೂಢನಾಗಿ ನಿಂತು ಮುಂದಕ್ಕೆ ಹೋಗುವುದೇ ಅಥವಾ ಬಂದ ದಾರಿಯನ್ನೇ ಹಿಡಿದು ಹಿಂತಿರುಗುವುದೇ ಎಂದಾಲೋಚಿಸಿದನು. ಬಗೆಹರಿಯಲಿಲ್ಲ. ಶಾಂತವಾದ ಕಾಡಿನಲ್ಲಿ ಸ್ವಲ್ಪಹೊತ್ತು ರಾಗಕ್ಕೆ ಕಿವಿಗೊಟ್ಟು ನಿಲ್ಲುವ ಮೃಗವಂತೆ ಅವನು ನಿಂತನು. ಅವ್ಯಕ್ತವಾದ ಆದರೆ ಸಂತತವಾದ ಸಣ್ಣ ದನಿಯೊಂದು ಅವನ ಕಿವಿಗೆ ಬಿದ್ದಿತು. ಆ ದನಿಯು ಏತರದೆಂದು ಆಲೋಚಿಸಿ ತೀರ್ಮಾನಿಸಿಕೊಂಡು ಅವನು ಮುಂದಕ್ಕೆ ಸಾಗಿದನು. ಆ ಶಬ್ದವು ಬರುತ್ತಿದ್ದ ಕಡೆಗೇ ಹೋಗುತ್ತಿದ್ದನು. ಅರಗುವರನು ಸದ್ಗುರುವನ್ನು ಹಿಂಬಾಲಿಸುವ ಸಚ್ಛಿಷ್ಯನಂತೆ ಅವನನ್ನೇ ಹಿಂಬಾಲಿಸಿದನು. ಅವನು ನಿಂತಲ್ಲಿ ತಾನೂ ನಿಂತನು. ಅವನು ನೋಡಿದ ಕಡೆ ತಾನೂ ನೋಡಿದನು. ಆ ಕಿರುಬೆಳಕಿನಲ್ಲಿ ಅಸ್ಫುಟವಾಗಿ ಕಾಣುತ್ತಿದ್ದ ಪದಾರ್ಥಗಳನ್ನೇ ನೋಡುತ್ತಿದ್ದನು. ಧ್ವನಿಯು ಸ್ಪಷ್ಟವಾಗಿ ಕೇಳುವಂತಾಗಿ ಹರಿಯುತ್ತಿರುವ ನೀರಿನದೆಂದು ತೀರ್ಮಾನವಾಯಿತು. ಆಮೇಲೆ ಮಾತಂಗನು ವೇಗವಾಗಿ ಮುಂದೆ ಸಾಗಿದನು.

ನದಿಯ ದಡದಲ್ಲಿ ಇಬ್ಬರೂ ನಿಂತರು. ಬೆಳುದಿಂಗಳ ಬೆಳಕು ತಿಳಿ ನೀರಿನ ಮೇಲೆ ಬಿದ್ದು ನೀರಿನ ಕಾಂತಿಯನ್ನು ಹೆಚ್ಚಿಸಿತ್ತು. ಚಂದ್ರನ ಕಾಂತಿಗೆ ಎಷ್ಟೋ ನಕ್ಷತ್ರಗಳು ಕಣ್ಣಿಗೆ ಕಾಣದಂತಾಗಿದ್ದುವು. ಪ್ರಬಲರ ಸಂಗಡ ಹೋರಾಟಕ್ಕೆ ಹೊರಟ ದುರ್ಬಲರು ಜಯಿಸುವುದೆಲ್ಲಿ? ಕೆಲವು ನಕ್ಷತ್ರಗಳು ಮಾತ್ರ ನಮಗೂ ನಮ್ಮ ಬೆಳಕಿಗೂ ಈ ವಿಶಾಲವಾದ ಪ್ರಪಂಚ ದಲ್ಲಿ ಒಂದು ಸ್ಥಾನವಿದೆ ಎಂದು ತೋರಿಸುವಂತೆ ಮಿನುಗುತ್ತಿದ್ದುವು. ರಾಜ ಪುತ್ರನ ಮನಸ್ಸು ಸೃಷ್ಟಿಯ ನಿಸರ್ಗ ಸೌಂದರ್ಯದೆಡೆಗೆ ಸಾಗುತ್ತಿದ್ದಾಗ ಮಾತಂಗನ ಮನಸ್ಸು ಮಾತ್ರ ಯಾವುದನ್ನೋ ಆಲೋಚಿಸುತ್ತಿತ್ತು. ಅವನು ಸುತ್ತಲೂ ತಿರುಗಿ ನೋಡಿದನು. ತಪಸ್ವಿಗಳಂತೆ ಇದ್ದ ನಿಡುಮರಗಳ ಮಧ್ಯದಲ್ಲಿ ತನ್ನ ನೋಟವನ್ನು ನೂಕಿದನು. ಅವನು ಕಾಣಬೇಕೆಂದಿದ್ದ ವಸ್ತು ಎಲ್ಲೂ ಕಣ್ಣಿಗೆ ಬೀಳಲಿಲ್ಲ. ಮತ್ತೆ ನದಿಯ ಆಚೆ ದಡದ ಕಡೆಗೆ ಒಂದೇ ಸಮನೆ ನೋಡುತ್ತ ನಿಂತನು. ಅವನ ದೃಷ್ಟಿಗೆ ಅಲ್ಲೊಂದು ಕಟ್ಟಡ ವಿದ್ದಂತೆ ತೋರಿತು. ಬೆಳುದಿಂಗಳು ಅದರ ಮೇಲೆ ಸರಿಯಾಗಿ ಬಿದ್ದಾಗ ಅದಕ್ಕೊಂದು ಶಿಖರವಿದ್ದಂತೆಯೂ ಅವನಿಗೆ ತೋರಿತು. ಹರ್ಷದಿಂದ ಮುಖವು ಹಿಗ್ಗಿತು. ತಾನು ದಾರಿತಪ್ಪಲಿಲ್ಲವೆಂದು ತೀರ್ಮಾನಿಸಿಕೊಂಡು ಆ ದಡವನ್ನು ಸೇರಬಯಸಿದನು. ಮಧ್ಯದಲ್ಲಿರುವ ಆ ನದಿಯನ್ನು ದಾಟುವು ದೆಂತು? ಮೇಲ್ಭಾಗದಿಂದ ನೀರಿನ ಆಳವನ್ನು ಹಿಡಿಯಲಾಗುವುದೇ? ಕೊನೆ ಗವನು ರಾಜಪುತ್ರನನ್ನು ಕೂಗಿ ಅವನೊಡನೆ ಮಾತನಾಡುತ್ತಾ ನದಿಯ ದಡದಲ್ಲೇ ನಡೆದನು. ಕಲ್ಲುಗಳ ಸಾಲು ಅಡ್ಡಲಾಗಿರುವ ಕಡೆ ನುಸುಳಿ ನದಿಯು ಹರಿಯುತ್ತಿರುವುದನ್ನು ಕಂಡು ಅಲ್ಲಿ ಕಲ್ಲುಗಳ ದಾಟನಿಂದಲೇ ನದಿಯನ್ನು ದಾಟಿದನು. ಅವನು ಊಹಿಸಿದ್ದಂತೆ ಅದೊಂದು ದೊಡ್ಡ ದೇವಸ್ಥಾನವಾಗಿತ್ತು. ಅವನ ಆನಂದಕ್ಕೆ ಪಾರವೇ ಇರಲಿಲ್ಲ.

ಆ ಸಮಯದಲ್ಲಿ ಸಿದ್ಧರೂ ಸಾಧ್ಯರೂ ಅಲ್ಲಿ ನೆರೆದು ಇಂದುಶೇಖರನ ಪೂಜೆಯನ್ನು ಮಾಡುತ್ತಿದ್ದರು. ಮಾತಂಗ ರಾಜವಾಹನರಿಬ್ಬರೂ ಗುಡಿ ಯೊಳಕ್ಕೆ ಪ್ರವೇಶಿಸಿದರು. ರಾಜಪುತ್ರನು ಭಕ್ತಿಯಿಂದ ಒಲವಿಂದು ತಲೆ ಬಾಗಿದನು. ಮಾತಂಗನೂ ಹಾಗೆಯೇ ಮಾಡಿದನು. ಆದರೂ ಅವನ ದೃಷ್ಟಿಯು ಲಿಂಗದ ಮೇಲೆ ಇತ್ತು. ಎರಗುವ ಮುಂಚೆ ಬೆಳ್ಳಗೆ ಮಿರುಗುತ್ತಿದ್ದ

ಆ ಲಿಂಗವನ್ನು ದಿಟ್ಟಿಸಿ ನೋಡಿದನು. ಸ್ಫಟಿಕಲಿಂಗವೆಂದು ತಿಳಿದ ಮೇಲೆ ಸ್ವಪ್ನದಲ್ಲಿ ಚಂದ್ರಶೇಖರನು ತಿಳಿಸಿದ ಲಿಂಗವು ಇದೇ ಇದ್ದಿರಬೇಕೆಂದು ನಿಶ್ಚಯಿಸಿಕೊಂಡನು. ಭಕ್ತಿಯ ಭಾರಕ್ಕೋ ಎಂಬಂತೆ ಬಗ್ಗಿ ನಮಿಸಿದನು. ಎದ್ದವನೇ ಪುನಃ ಪ್ರದಕ್ಷಿಣೆ ಹೊರಟನು. ಈ ಸಲ ಅವನು ಭಕ್ತಿಯಿಂದ ಪ್ರದಕ್ಷಿಣೆ ಮಾಡಲು ಹೊರಟಿರಲಿಲ್ಲ. ಅವನ ಕಣ್ಣುಗಳೆರಡೂ ನೆಲದ ಕಡೆಗೆ ಸಾಗಿದ್ದುವು. ಸಂದೇಹ ಬಂದ ಕಡೆ ಬಗ್ಗಿ ನೋಡಿದನು. ಹೀಗೆ ಬರುತ್ತಿರಲು ಒಂದು ಕಡೆ ಬಿಲ್ವಪತ್ರೆಗಳು ಹಾಸಿದ್ದ ಶಿಲೆಯನ್ನು ಕಂಡನು. ಆ ಪತ್ರೆಗಳನ್ನು ದೂರಸರಿಸಿ ನೋಡಿದನು. ಅದು ಭವಾನಿಯ ಪದಚಿಹ್ನೆ ಯಾಗಿತ್ತು. ರಾಜಪುತ್ರನೂ ಮಾತಂಗನೂ ನಮಿಸಿದರು. ಪಾರ್ವತಿಯ ಪಾದಚಿಹ್ನೆಯಿಂದ ಪವಿತ್ರವಾಗಿದ್ದ ಆ ಶಿಲೆಯು ಬಹು ದೊಡ್ಡದಾಗಿದ್ದಿತು. ಮಾತಂಗನು ಅದರ ಬುಡವನ್ನೇ ಹುಡುಕುತ್ತ ಹೋದನು. ಕೊನೆಗೊಂದು ಕಡೆ ಆ ಕಲ್ಲಿನ ಬುಡದಲ್ಲಿ ಬ್ರಹ್ಮನ ಮುಖದಂತೆ ನಾಲ್ಕುಕಡೆಯಿಂದಲೂ ಪ್ರವೇಶಿಸಬಹುದಾದ ದೊಡ್ಡ ಬಿಲವೊಂದು ಕಂಡಿತು. ರಾಜಪುತ್ರನು ಹಿಂದೆ ಬರುತ್ತಿರುವನೋ ಇಲ್ಲವೋ ಎಂದು ನೋಡುವನಂತೆ ಮಾತಂಗನು ಹಿಂದಕ್ಕೊಮ್ಮೆ ನೋಡಿ ಧೈರ್ಯದಿಂದ ಬಿಲದೊಳಕ್ಕೆ ಪ್ರವೇಶಿಸಿಬಿಟ್ಟನು. ಧೈರ್ಯಶಾಲಿಯಾದ ದೊರೆಗುವರನು ಅಲ್ಲಿಯೂ ಅವನನ್ನು ಹಿಂಬಾಲಿಸಿದನು. ಮಹಾತ್ಮರಿಗೆ ಭಯವುಂಟೆ ?

ಕಗ್ಗತ್ತಲೆ. ಮುಂದಿದ್ದ ಮಾತಂಗನು ರಾಜವಾಹನನಿಗೆ ಕಾಣುತ್ತಿರಲಿಲ್ಲ. ಆದರೂ ಒಬ್ಬರು ನುಗ್ಗುವಷ್ಟೇ ದಾರಿ ಇದ್ದುದರಿಂದ ಒಬ್ಬರ ಹಿಂದೊಬ್ಬರು ನಡೆಯಲೇ ಬೇಕಾಗಿತ್ತು. ಆ ಬಿಲದಲ್ಲಿ ಸ್ವಲ್ಪ ದೂರ ನಿರ್ಭಯವಾಗಿ ಮೌನವಾಗಿ ಇಬ್ಬರೂ ನಡೆದರು. ಸ್ವಲ್ಪ ದೂರ ನಡೆದ ಮೇಲೆ ಅವರ ವಿಸ್ಮಯಕ್ಕೆ ತಕ್ಕಂತೆ ಬೆಳಕಾಗುತ್ತ ಬಂತು. ಕಾವಲುಗಾರರ ಕೋಲಾಹಲವೂ ಕೇಳಿಸಿತು. ಮಾತಂಗನು ರಾಜವಾಹನನಿಗೆ ಮಾಡಬೇಕಾದ್ದನ್ನು ತಿಳಿಸಿದನು. ರಾಜಪುತ್ರನು ತನ್ನ ಖಡ್ಗದಿಂದಲೇ ಅವರೆಲ್ಲರನ್ನೂ ಯಮಸದನವನ್ನು ಸೇರಿಸಿದನು. ಮಣಿಯ ಬೆಳಕಿನಲ್ಲಿ ತಾಮ್ರಶಾಸನವನ್ನು ಮಾತಂಗನು ಜಾಗ್ರತೆಯಾಗಿ ಕೈಗೆ ತೆಗೆದುಕೊಂಡನು. ಅದರಲ್ಲಿನ ಪ್ರತಿಪಂಕ್ತಿಯನ್ನೂ ಬಹು ಜಾಗರೂಕತೆಯಿಂದ ಓದಿಕೊಂಡನು. ಹಿಂದಿನ ದಿನ ಸ್ವಪ್ನದಲ್ಲಿ

ಈಶ್ವರನು ತಿಳಿಸಿದುದೆಲ್ಲವೂ ನಿಜವಾಯಿತೆಂದೂ, ತಾಮ್ರ ಶಾಸನದ ಶಾಸನದಂತೆ ಮುಂದಿನ ಕಾರ್ಯ ನಡೆಯಬೇಕೆಂದೂ ಅವನು ಆ ವೀರ ಒಡನಾಡಿಗೆ ಹೇಳಿದನು.

ಈಗ ಅವರಿಗೆ ಬಿಲವೆಂಬ ಪರಿವೆಯಿರಲಿಲ್ಲ. ಮಣಿಯ ಬೆಳಕಿನಲ್ಲಿ ಕತ್ತಲೆಯ ಸೆಲೆಯಿಲ್ಲ. ವೇಗವಾಗಿ ಮುಂದುವರಿದು ಅವರು ರಸಾತಲದ ವಿಶಾಲವಾದ ಪಟ್ಟಣದ ಹೊರವಲಯವನ್ನು ಸೇರಿದರು. ಅಲ್ಲಿ ಮಾತಂಗನು ಸ್ವಲ್ಪ ಹೊತ್ತು ನಿಂತು ಆಲೋಚಿಸಿ ಸಮೀಪದಲ್ಲಿ ಕಾಣುತ್ತಿದ್ದ ಕ್ರೀಡೋದ್ಯಾನದ ಕಡೆಗೆ ನಡೆದನು. ಬಹು ರಮ್ಯವಾದ ಆ ಉದ್ಯಾನದಲ್ಲಿ ನೀರ್ವಕ್ಕಿಗಳಿಂದಲೂ ರಾಜಹಂಸಗಳಿಂದಲೂ ಮನೋಹರವಾಗಿದ್ದ ಸರೋವರದ ಒಳಿ ಇಬ್ಬರೂ ಬಂದುನಿಂತರು. ಮಾತಂಗನು ತಡಮಾಡದೆ ಸರೋವರದೊಳಕ್ಕೆ ಧುಮುಕಿ ಮಿಂದನು. ಸಮೀಪದಲ್ಲಿ ಸಿಕ್ಕಿದ ಕಾಷ್ಟಗಳಿಂದ ಬೆಂಕಿಯನ್ನು ಹೊತ್ತಿಸಿ ರಾಜಪುತ್ರನು ಅಲ್ಲಿದ್ದ ಹೋಮದ್ರವ್ಯಗಳನ್ನು ಸಿದ್ಧಗೊಳಿಸಿದನು. ಬರುವ ಎಡರುಗಳನ್ನು ತೊಡೆದುಹಾಕುವಂತೆ ನೃಪಕುಮಾರನಿಗೆ ತಿಳಿಸಿ ಮಾತಂಗನು ಹೋಮಕ್ಕೆ ಮೊದಲು ಮಾಡಿದನು. ವಿಶ್ವಾಮಿತ್ರನ ಯಾಗವನ್ನು ಲಕ್ಷ್ಮಣನೊಡನೆ ರಾಮಚಂದ್ರನು ಕಾಪಾಡಿದಂತೆ ಖಡ್ಗಪಾಣಿಯಾದ ರಾಜಕುಮಾರನು ಮಾತಂಗನ ಹೋಮವನ್ನು ಕಾಯುತ್ತಿದ್ದನು. ತುಪ್ಪವು ಬಿದ್ದಂತೆಲ್ಲಾ ಅಗ್ನಿಯು ಪ್ರಜ್ವಲಿಸುತ್ತಾ ಹವಿಸ್ಸಿನ ರುಚಿಯಿಂದಲೋ ಎಂಬಂತೆ ತನ್ನ ಕುಡಿನಾಲಗೆಗಳನ್ನು ಮೇಲಕ್ಕೆ ಚಾಚುತ್ತಿತ್ತು. ಎಲ್ಲೆಲ್ಲೂ ಹೋಮಧೂಮವು ಹರಡಿ ಕತ್ತಲೆಗಟ್ಟಿತು. ರಾಜವಾಹನನು ಸಮಿತ್ತುಗಳನ್ನು ಹಾಕುತ್ತಿರಲು ಮಾತಂಗನು ಮಂತ್ರಗಳನ್ನು ಉಚ್ಚರಿಸುತ್ತ ಎದ್ದುನಿಂತವನು ತುಪ್ಪವನ್ನು ತನ್ನ ತಲೆಯ ಮೇಲೆ ಸುರಿದುಕೊಂಡು "ಅಗ್ನಯೇ ಸ್ವಾಹಾ" ಎನ್ನುತ್ತಾ ಆ ಬೆಂಕಿಯೊಳಕ್ಕೆ ಹವ್ವನೆ ಹಾರಿದನು. ರಾಜಪುತ್ರನು ಆಶ್ಚರ್ಯದಿಂದ ಸ್ತಂಭದಂತಾದನು.

ರಸಾತಲ ರಾಜ್ಯದ ಮುಖ್ಯ ಪಟ್ಟಣದಲ್ಲೆಲ್ಲ ಹರಡಿದ ಹೋಮಧೂಮವು ಆ ರಾಜ್ಯದ ರಾಜಪುತ್ರಿಯಾದ ಕಾಳಿಂದಿಯ ಮನಸ್ಸಿನಲ್ಲಿ ಹರ್ಷವನ್ನು ಹುಟ್ಟಿಸಿತು. ಸಿದ್ಧತಪಸ್ವಿಯು ಹೇಳಿದ್ದ ಮಾತುಗಳು ಅವಳ ನೆನಪಿಗೆ ಬಂದುವು. ಯಾವನೋ ಒಬ್ಬ ಮನುಷ್ಯನು ರಾಜಕುಮಾರನೊಂದಿಗೆ

ಬಂದು ಹೋಮಮಾಡಿ ದಿವ್ಯದೇಹ ಧರಿಸುವನೆಂದೂ, ಅವನೇ ರಸಾತಲದ ರಾಜನಾಗುವನೆಂದೂ, ಅವನನ್ನು ವಿವಾಹವಾಗಿ ಅವಳು ರಸಾತಲದ ರಾಣಿ ಯಾಗುವಳೆಂದೂ ಅವನು ತಿಳಿಸಿದ್ದನು. ಅದನ್ನು ನೆನೆನೆನೆದು ಹೊಂಪುಳಿ ಹೋದಳು. ತಂದೆಯಾದ ಅಸುರೋತ್ತಮನು ವಿಷ್ಣುವಿನ ಚಕ್ರಕ್ಕೆ ತುತ್ತಾಗಿ ಹೋದಂದಿನಿಂದ ಅವಳ ಮನಸ್ಸಿನಲ್ಲಿ ಆನಂದದ ಲೇಶವಾದರೂ ಇದ್ದಿರಲಿಲ್ಲ. ಅವಳ ಆ ದುಃಖಸಾಗರದಲ್ಲಿ ಸಿದ್ಧತಾಪಸನ ಮಾತುಗಳು ಆಶ್ರಯಕೊಟ್ಟ ಹಲಗೆಯಂತಿದ್ದುವು. ವಾಸನೆಯಿಂದ ಹೋಮಧೂಮವೆಂದವಳು ತೀರ್ಮಾ ನಿಸಿಕೊಳ್ಳುವಷ್ಟರಲ್ಲಿ ಆಳುಗಳು ಸಂಭ್ರಮದಿಂದ ಓಡಿಬಂದು "ದೇವಿ, ಯಾವನೋ ಒಬ್ಬ ಮನುಷ್ಯನು ಬಂದು ತನ್ನ ದೇಹವನ್ನೇ ಅಗ್ನಿಯಲ್ಲಿ ಹೋಮಿಸಿದನು. ಪುನಃ ದಿವ್ಯದೇಹವನ್ನು ಧರಿಸಿ ಬೆಂಕಿಯಿಂದೀಚೆಗೆ ಬಂದನು. ಜೊತೆಗೆ ಬಂದಿದ್ದ ರಾಜಪುತ್ರನು ಆಶ್ಚರ್ಯ ಚಕಿತನಾಗಿದ್ದಾನೆ" ಎಂದು ಹೇಳಿದರು. ಈ ಮಾತುಗಳು ಅವಳ ಕಿವಿಗೆ ಅಮೃತದಂತಿದ್ದುವು. ಆ ಆಳುಗಳನ್ನೇ ಮಂತ್ರಿಗಳ ಬಳಿಗಟ್ಟಿ ಸಕಲ ಸಿದ್ಧತೆಗಳಿಂದ ಕೂಡಲೇ ಬರುವಂತೆ ಹೇಳಿ ಕಳುಹಿಸಿದಳು. ತಾನೂ ಕೂಡ ಅವರ ಬರವಿನ ಬಿಡುವಿನಲ್ಲಿ ರನ್ನದೊಡವೆಗಳಿಂದ ಒಡಲನ್ನು ಸಡಗರದಿಂದ ಸಿಂಗರಿಸಿಕೊಂಡಳು. ಸಹಜ ಸುಂದರಿಯಾದ ಆ ರಸಾತಲ ಮೋಹಿನಿಯು ಜಗನ್ಮೋಹಿನಿಯಂತೆ ಅನೇಕ ಸಖಿಯರ ಮಧ್ಯದಲ್ಲಿ ಮಂದಗಮನದಿಂದ ಮುಂದುವರೆದಳು. ಅವಳ ಕೈಯಲ್ಲಿದ್ದ ಚಿನ್ನದ ತಟ್ಟೆಯಲ್ಲಿ ಒಂದು ದೊಡ್ಡ ದಿವ್ಯಮಣಿ ಪ್ರಕಾಶಿಸುತ್ತಿತ್ತು. ಈ ವೇಳೆಗೆ ಮಂತ್ರಿಗಳೆಲ್ಲರೂ ತಕ್ಕ ಸಿದ್ಧತೆಗಳಿಂದ ಬಂದು ಸೇರಿದರು.

ಇವರ ವಾದ್ಯ ಪೂರಿತವಾದ ಮೆರೆವಣಿಗೆಯು ಪಟ್ಟಣದ ರಾಜಬೀದಿ ಯಲ್ಲಿ ಹೊರಟು ಉದ್ಯಾನದ ಕಡೆಗೆ ತಿರುಗಿತು. ರಾಜಕುಮಾರನು ಶಬ್ದ ಬರುತ್ತಿದ್ದ ಕಡೆ ನೋಡಿದನು. ಅಲ್ಲಿ ದಿವ್ಯ ನರನಾರೀ ಸಮೂಹವನ್ನು ನೋಡಿ ಚಕಿತನಾದನು. ದಿವ್ಯದೇಹಧಾರಿಯಾಗಿದ್ದ ಮಾತಂಗನು ರಾಜ ಪುತ್ರನ ಹೆಗಲ ಮೇಲೆ ಕೈಹಾಕಿ "ಇದೆಲ್ಲ ನಿನ್ನ ಭಾಗ್ಯ" ಎಂದನು. ಮೊದಲೇ ಆಶ್ಚರ್ಯಚಕಿತನಾಗಿದ್ದ ರಾಜಪುತ್ರನಿಗೆ ಮತ್ತಷ್ಟು ಆಶ್ಚರ್ಯವಾಗಿ ಏನೂ ತೋರದಾಯಿತು. ಆ ಜನ ತಂಡದ ನಡುವೆ ಅಲಂಕೃತಳಾಗಿ ಮಣಿ ಯೊಡನೆ ಬಂದ ರಮಣೀ ಮಣಿಯನ್ನು ನೋಡಿ ಏನೆಂದು ಊಹಿಸಲಾರದೆ

ಹೋದನು. ಬರಬರುತ್ತ ದಿವ್ಯಕನ್ಯೆಯ ಪರಿವಾರವು ಇಬ್ಭಾಗವಾಗಿ ಹಿಂದಕ್ಕೆ ಸರಿಯಿತು. ಸಖಿಯರು ಗೆಳತಿಯ ಬೆನ್ನ ಹಿಂದೆ ಸರಿದರು. ಕಾಲಿಂದಿಯು ಭಕ್ತಿಯುಕ್ತವಾದ ನಾಚಿಕೆಯಿಂದ ತಲೆತಗ್ಗಿಸಿ ಮಣಿಯನ್ನು ಮಾತಂಗನ ಪಾದ ತಲದಲ್ಲಿಟ್ಟು "ಮಹಾತ್ಮನೆ, ನನ್ನ ಈ ಧೈರ್ಯದ ಯಾಚನೆಗೆ ಕ್ಷಮೆ ಬೇಡು ತ್ತೇನೆ. ಸಿದ್ಧತಾಪಸನ ಮಾತಿನಂತೆ ನಿನ್ನ ಬರವನ್ನೇ ನಾನು ಹಾರೈಸು ತ್ತಿದ್ದೆನು. ಇಂದು ನನ್ನ ಮನೋರಥ ಸಿದ್ಧಿಯಾಯಿತು. ಮೋಡವನ್ನ ಪೇಕ್ಷಿಸುವ ಚಾದಗೆಗೆ ಮುಂಗಾರ ಮುಗಿಲು ಮೂಡಿದುವು. ರಾಜ್ಯಲಕ್ಷ್ಮಿ ಯನ್ನೂ ನನ್ನನ್ನೂ ಒಟ್ಟಿಗೆ ಸ್ವೀಕರಿಸು" ಎಂದು ವಿಜ್ಞಾಪಿಸಿದಳು. ರಾಜ ವಾಹನನು ಮಾತಂಗನಿಗೆ ಕಣ್ಣುಸನ್ನೆಮಾಡಿ ಅವಳ ವಿಜ್ಞಾಪನೆಗೆ ಒಪ್ಪಿ ದಂತೆ ಸೂಚಿಸಿದನು.

ರಸಾತಲ ರಾಜರಾಣಿಯರಾದ ಮಾತಂಗ ಕಾಳಿಂದಿಯರಿಂದ ಬೀಳ್ಕೊಂಡು ರಾಜವಾಹನನು ಸ್ನೇಹಿತರನ್ನು ನೋಡುವ ಭರದಿಂದ ಹಿಂತಿರುಗಿ ದನು. ಅವನಿಗಿನ್ನು ಮುಂದೆ ಹಸಿವೆ ನೀರಡಿಕೆಗಳ ಭಯವಿರಲಿಲ್ಲ. ತಾನು ಕಾಣಿಕೆಯಾಗಿ ತಂದಿದ್ದ ಹಸಿವು ನೀರಡಿಕೆಗಳನ್ನು ಆಗಗೊಡದಿರುವ ಆ ದಿವ್ಯ ಮಣಿಯನ್ನು ಕಾಳಿಂದಿಯು ಮಾತಂಗನ ಇಷ್ಟದಂತೆ ಕೃತಜ್ಞತೆಯ ಕುರು ಹಾಗಿ ರಾಜಕುಮಾರನಿಗೊಪ್ಪಿಸಿದ್ದಳು. ರಸಾತಲ ರಾಜನಾದ ಆ ಮಾತಂಗನ ಸ್ನೇಹವು ಮಣಿಯ ರೂಪದಿಂದ ರಾಜಪುತ್ರನನ್ನು ಅನುಸರಿಸಿತು. ಅಷ್ಟು ಉದ್ದವಾಗಿದ್ದ ಬಿಲದ ಮಾರ್ಗವು ಈಗ ಅತಿಹ್ರಸ್ವವಾದಂತೆ ಅವನಿಗೆ ತೋರಿತು. ಅಸಹಾಯ ಶೂರನಾದ ಅವನು ಮಾತಂಗನಿದ್ದ ಆಶ್ರಮಕ್ಕೆ ಬಂದು ಸುತ್ತ ಹುಡುಕಿದನು. ಗೆಳೆಯರು ಯಾರೂ ಇರಲಿಲ್ಲ. ಅವರನ್ನು ಹುಡುಕುತ್ತ ಹೊರಟನು. ಮಾತಂಗನ ಚರಿತ್ರೆಯು ಅವನನ್ನು ವಿಸ್ಮಯ ಮೂಢನನ್ನಾಗಿ ಮಾಡಿತ್ತು. ಬೆಳಕು ಬರಬೇಕಾದರೆ ಹೇಗೆ ಒಂದೇ ಮಾರ್ಗ ವಲ್ಲವೋ ಹಾಗೆ ವಿಧಿಯು ಒಲಿಯುವಾಗ ಒಂದೇ ಮಾರ್ಗದಿಂದ ಒಲಿಯುವು ದಿಲ್ಲವೆಂದು ಅಂದುಕೊಳ್ಳುತ್ತ ಕಾಡಿನಲ್ಲಿ ನಡೆದನು. ಅದೃಷ್ಟವು ಫಲಿಸುವ ಕಾಲವನ್ನು ಬಲ್ಲವರಾರು ?

೪

ಮೊದಲೇ ಮನೋಹರವಾಗಿದ್ದ ಅವಂತಿಕಾಪುರದ ಉದ್ಯಾನವು ಇಂದು ಮತ್ತಷ್ಟು ಶೋಭಿಸುತ್ತಿತ್ತು. ಮಾನಸಾರನ ಮಗಳಾದ ಅವಂತಿ ಸುಂದರಿಯು ಮನ್ಮಥಪೂಜೆಯನ್ನೆಸಗಲು ಉದ್ಯಾನಕ್ಕೆ ಬರುವಳೆಂದು ಗೊತ್ತಾಗಿತ್ತು. ತೋಟದ ಕೆಲಸಗಾರರಿಗೆ ಉದ್ಯಾನವನ್ನು ಅಲಂಕರಿಸುವ ಸಂಭ್ರಮ. ವಸಂತನೂ ಈ ಕೆಲಸದಲ್ಲಿ ಸಹಾಯ ಮಾಡುವಂತಿತ್ತು. ಎಲ್ಲೆಲ್ಲಿ ನೋಡಿದರೂ ಚಿಗುರಿದ ಮಾಮರಗಳು! ಆ ಮರಗಳ ಹೂಗೊಂಚಲಿನ ಮಕರಂದವನ್ನು ಆಸ್ವಾದಿಸುವ ದುಂಬಿಗಳ ಝೇಂಕಾರವು ದಿಗಂತವನ್ನು ಮುಟ್ಟುತ್ತಿತ್ತು. ಯಾವ ಹೂಗಿಡದಲ್ಲಿ ನೋಡಿದರೂ ಮೊಗ್ಗುಗಳು. ಯಾವ ಲತೆಯನ್ನು ಕಂಡರೂ ಪುಷ್ಪಭರದಿಂದ ಅದು ಬಗ್ಗಿಹೋದಂತೆ ಕಾಣುತ್ತಿತ್ತು. ಹೀಗೆ ವಸಂತನು ತಾನಾಗಿಯೇ ಅಲಂಕರಿಸಿದ್ದ ಉದ್ಯಾನವನ್ನು ತೋಟಗಾರನು ಮತ್ತಷ್ಟು ಅಲಂಕರಿಸಿದನು.

ವನದ ನಡುವೆ ಸೊಗಸಾಗಿ ನಿಂತಿದ್ದ ಕಿರುಮಾಮರದ ಶೋಭೆಯನ್ನು ಹೇಳತೀರದು. ಅದರ ಬುಡದಲ್ಲಿದ್ದ ಮರಳನ್ನು ಸಮಮಾಡಿ ನೀರು ಚೆಲ್ಲಿ ಅಲ್ಲಿ ಮನ್ಮಥನ ಸುಂದರವಾದೊಂದು ಪ್ರತಿಮೆಯನ್ನಿಟ್ಟಿದ್ದರು. ಒಂದು ತಟ್ಟೆಯಲ್ಲಿ ವಿಧವಿಧವಾದ ಹೂಗಳು, ಮತ್ತೊಂದರಲ್ಲಿ ಮನ್ಮಥನ ವಿಗ್ರಹಕ್ಕೆ ಹೊದಿಸುವ ತೆಳುಬಟ್ಟೆ; ಇನ್ನೊಂದರಲ್ಲಿ ಮಂಗಳದ್ರವ್ಯಗಳು – ಹೀಗೆ ಪೂಜಾ ಸಾಮಗ್ರಿಯನ್ನು ಸಿದ್ಧಗೊಳಿಸಿದ್ದರು. ಊರಿನ ಹೆಂಗುಸರ ಗುಂಪಿನಿಂದ ಸುತ್ತುವರೆದ ಅವಂತಿಸುಂದರಿಯು ಅಲಂಕೃತಳಾಗಿ ಬಾಲಚಂದ್ರಿಕೆಯೆಂಬ ಗೆಳತಿಯೊಡನೆ ಮಾರ ಪೂಜೆಗಾಗಿ ಅಲ್ಲಿಗೆ ಬಂದಳು. ತಾನೇ ನೀರೆರೆದು ಬೆಳೆಸಿದ್ದ ಆ ಮಾವಿನ ಮರದ ಬುಡವನ್ನು ಬಂದು ಸೇರಿದಳು.

ಉದ್ಯಾನವನದ ಸೊಬಗಿಗೆ ಮರುಳಾಗಿ ಇಬ್ಬರು ನಡೆದು ಬರುತ್ತಿದ್ದರು. ಚಿಗುರು ಹೂ ಹಣ್ಣುಗಳಿಂದ ಶೋಭಿಸುತ್ತಿದ್ದ ಮಾಮರಗಳು ಮೆಲ್ಲೆಲರಿನಿಂದ ತಲೆದೂಗುತ್ತಿದ್ದುವು. ಆ ಮರಗಳಲ್ಲಿ ಕುಳಿತಿದ್ದ ಕೋಗಿಲೆಗಳು ಕನ್ನಡ ವಕ್ಕಿಗಳು ದುಂಬಿಗಳು ಇಂಚರದಿಂದ ದನಿಗೆಯ್ಯುತ್ತಿದ್ದುವು. ಅದನ್ನು ಕೇಳುತ್ತಿದ್ದ ಅವರ ಮನಸ್ಸು ವಸಂತನ ಒಸಗೆಯನ್ನು ವಿಚಾರಮಾಡುತ್ತಿತ್ತು.

ಸುತ್ತಲೂ ತಿಳಿನೀರಿನಿಂದ ರಮ್ಯವಾಗಿದ್ದ ಕೊಳಗಳು ಕಮಲ ಕನ್ನೈದಿಲೆ ಕಲ್ಹಾರ ಪುಷ್ಪಗಳಿಂದ ನಗುತ್ತಿದ್ದುವು. ಆ ಕೊಳಗಳಲ್ಲಿ ಆಟವಾಡುತ್ತಿದ್ದ ರಾಜಹಂಸಗಳ ಮೆಲುದನಿಯು ಅವರ ಮನಸ್ಸನ್ನು ಸೂರೆಗೊಂಡಿತ್ತು. ಅವರಲ್ಲಿ ಒಬ್ಬನು ಮಾತ್ರ ಮೊದಲೇ ತಿಳಿದವನೋ ಎಂಬಂತೆ ಅಲಂಕರಿಸಿದ್ದ ಮಾಮರದ ಕಡೆಗೆ ನುಗ್ಗಿ ಬರುತ್ತಿದ್ದನು. ಬ್ರಾಹ್ಮಣನಂತಿದ್ದ ಅವನ ಸ್ನೇಹಿತನು ನೆರಳಿನಂತೆ ಅವನನ್ನೇ ಹಿಂಬಾಲಿಸುತ್ತಿದ್ದನು. ಮುಂದು ವರೆಯಲು ಶಂಕಿಸುತ್ತಿದ್ದ ಅವರಿಗೆ ಬಾಲಚಂದ್ರಿಕೆಯ ಕೈಸನ್ನೆಯು ಧೈರ್ಯ ವನ್ನುಂಟುಮಾಡಿತು. ಹೆಂಗುಸರ ತಂಡಕ್ಕೆ ಸ್ವಲ್ಪ ದೂರದಲ್ಲಿ ಎಲ್ಲರಿಗೂ ಕಾಣುವಂತೆ ಅವರೀರ್ವರೂ ನಿಂತರು.

ಬ್ರಾಹ್ಮಣ ವೇಷಧಾರಿಯ ನೋಟವು ಪೂಜೆಮಾಡುತ್ತಿದ್ದ ಅವಂತಿ ಸುಂದರಿಯ ಕಡೆಗೆ ನಾಗಿತು. ಅವಳನ್ನು ಮೂರ್ತಿಮಂತಳಾದ ಲಕ್ಷ್ಮಿಯೆಂದು ಅವನು ಬಗೆದನು. ಪೂಜೆಮಾಡುತ್ತಿದ್ದ ರಾಜಪುತ್ರಿಯು ಮುಖವೆತ್ತಿ ನೋಡಿದಳು. ತನ್ನ ಪೂಜೆಗೊಲಿದು ವರಪ್ರದಾನಮಾಡಲು ಬಂದ ಮೈವೆತ್ತ ಮನ್ಮಥನೆಂದು ಭ್ರಮಿಸಿದಳು. ಮೆಲ್ಲೆಲರಿನಿಂದ ಅಲುಗಾಡುವ ಲತೆಯಂತೆ ಮದನಾವೇಶದಿಂದ ನಡುಗಿದಳು ಆ ತರುಣಿ. ಆತನ ಎದುರಿನಲ್ಲಿ ನಿಲ್ಲ ಲಾರದೆ ಗೆಳತಿಯ ಒಡಲ ನೆರಳಿನಲ್ಲಿ ಅವಿತುಕೊಂಡಳು. ಆತನ ಸೌಂದ ರ್ಯದ ಬಲೆಗೆ ಅವಳ ಮನೋಮೃಗವು ಸಿಕ್ಕಿಬಿದ್ದಿತ್ತು. ಅವನನ್ನು ನೋಡ ದಿರಲು ಅವಳಿಗೆ ಸಾಧ್ಯವಾಗಲಿಲ್ಲ. ಇರ್ವರ ಮನಸ್ಸೂ ಹೀಗೆ ಬೆರೆಯಿತು. ಆತನ ಊರು – ಕೇರಿ, ಕುಲ ಶೀಲಗಳನ್ನರಿಯಲು ಅರಗುವರಿಯು ಕಾತುರ ಪಡುತ್ತಿದ್ದಳು. ರೂಪದಿಂದ ತನ್ನನ್ನು ಜಯಿಸಿದ ಆತನನ್ನು ನೋಡುತ್ತಿರುವ ಳೆಂಬ ಅಸೂಯೆಯಿಂದ ಮನ್ಮಥನು ಅವಳ ಮನಸ್ಸನ್ನು ಕಡೆದನು. ಅವನ ಹೆಸರು ಅನ್ವರ್ಥವಾಯಿತು.

ರಾಜಪುತ್ರಿಯ ನಚ್ಚಿನ ಗೆಳತಿಯಾದ ಬಾಲಚಂದ್ರಿಕೆಗೆ ಇವರೀರ್ವರ ಭಾವೈಕ್ಯವು ಗೋಚರವಾಗದೆ ಇರಲಿಲ್ಲ. ಅವಳು ತನ್ನ ಉಪಾಯವು ಫಲಿಸಿದ್ದಕ್ಕಾಗಿ ಪಟ್ಟ ಆನಂದವನ್ನು ನೋಟದಿಂದಲೇ ತನ್ನ ಪ್ರಿಯನಾದ ಪುಷ್ಪೋದ್ಭವನಿಗೆ ಸೂಚಿಸಿದಳು. ರಾಜವಾಹನನು ಅಲ್ಲಿ ಇಲ್ಲಿ ಸುತ್ತಿ ಕೊನೆಗೆ ಅವಂತಿಕಾಪುರದಲ್ಲಿದ್ದ ತನ್ನ ಸ್ನೇಹಿತನಾದ ಪುಷ್ಪೋದ್ಭವನ ಮನೆಗೆ ಬಂದು

ಸೇರಿದನು. ಅಂದೇ ಇವಳು ಈತನು ಅವಂತಿಸುಂದರಿಗೆ ತಕ್ಕ ವರನೆಂದು ಬಗೆದು ಸಮಯವನ್ನು ಕಾಯುತ್ತಿದ್ದಳು. ಈತನು ಮಗಧ ದೇಶದ ರಾಜ ಪುತ್ರನೆಂದು ಯಾರಿಗೂ ತಿಳಿಯದಂತೆ ಬ್ರಾಹ್ಮಣ ವೇಷದಲ್ಲಿರಿಸಿ ಸಕಲ ಕಲಾ ಕುಶಲನಾದ ಬ್ರಾಹ್ಮಣನೆಂದು ಪತಿಯಮೂಲಕ ಊರಿನಲ್ಲಿ ವಾರ್ತೆಯನ್ನು ಹಬ್ಬಿಸಿದ್ದಳು. ಇಂದು ಮನ್ಮಥಪೂಜೆಯ ವೇಳೆಗೆ ಉದ್ಯಾನಕ್ಕೆ ಕರೆತರುವಂತೆ ಕಾಂತನಿಗೆ ತಿಳಿಸಿ ತಾನು ಬಂದಿದ್ದಳು. ಅವಳು ಯೋಚಿಸಿದ್ದಂತೆ ಪುಷ್ಪೋ ದ್ಭವನೊಡನೆ ಬಂದ ರಾಜಪುತ್ರನ ರೂಪಕ್ಕೆ ರಾಜಪುತ್ರಿಯು ಮನಸೋತಳು. ಇವರಿಂದ ಅವಳಿಗೆ ಮಹಾನಂದ. ಗೆಳತಿಯನ್ನು ಕುರಿತು “ ಸಖಿ, ಸಮಸ್ತ ಕಲಾ ನಿಪುಣನೂ, ದೇವತಾ ಸನ್ನಿಧಾನಯುಕ್ತನೂ ಯುದ್ಧ ಕುಶಲನೂ ಆದ ಮಣಿಮಂತ್ರೌಷಧಿಗಳನ್ನು ಬಲ್ಲ ಬ್ರಾಹ್ಮಣಕುಮಾರನಂತಿರುವ ಈತನನ್ನು ಸತ್ಕರಿಸು ” ಎಂದು ಅಭಿಪ್ರಾಯಯುಕ್ತವಾಗಿ ಬಾಲಚಂದ್ರಿಕೆಯು ಮಾತ ನಾಡಿದಳು. ಸಂಪೂರ್ಣವಾಗಿಯಲ್ಲದಿದ್ದರೂ ಸ್ವಲ್ಪ ಮಟ್ಟಿಗೆ ಅವಂತಿ ಸುಂದರಿಯ ಮನಃಕಾತುರತೆಗೆ ಉತ್ತರವು ದೊರೆಯಿತು. ಮಾರಪೂಜೆಗೆಂದು ಬಂದಿದ್ದ ದೊರೆಮಗಳು ಜಿತಮಾರನಾದ ಕುಮಾರನನ್ನು ಪೂಜಿಸುವಂತೆ ಸಖಿಗೆ ಹೇಳಿ ತಾನು ನೋಟದಿಂದಲೇ ಅವನನ್ನು ಸತ್ಕರಿಸಿದಳು.

ಆ ವೇಳೆಗೆ ಸರಿಯಾಗಿ ಅಲ್ಲಿಗೊಂದು ರಾಜಹಂಸವು ಬಂತು. ರಾಜ ಪುತ್ರಿಗೆ ಅದನ್ನು ನೋಡಿ ಹಿಡಿದುಕೊಳ್ಳಬೇಕೆಂಬ ಆಸೆಯಾಯಿತು. ಪಕ್ಕ ದಲ್ಲಿದ್ದ ಗೆಳತಿಯನ್ನು ಕರೆದು ಅದನ್ನು ಹಿಡಿದು ತರುವಂತೆ ಹೇಳಿದಳು. ಆಗ ರಾಜಪುತ್ರನು ಇದೇ ಸುಸಮಯವೆಂದು ತಿಳಿದು ತನ್ನ ಮತ್ತು ರಾಜ ಪುತ್ರಿಯ ಹಿಂದಿನ ಜನ್ಮದ ಕತೆಯನ್ನು ಹೇಳತೊಡಗಿದನು—

“ ಗೆಳತಿ, ಹಿಂದೆ ಶಾಂಬನೆಂಬ ಒಬ್ಬ ರಾಜನಿದ್ದನು. ಅವನು ವಿಹರಿ ಸಲು ಕಾಂತೆಯೊಡನೆ ಉದ್ಯಾನಕ್ಕೆ ಬಂದನು. ಅಲ್ಲಿ ಕೊಳದ ಸಮೀಪದಲ್ಲಿ ನಿದ್ರೆ ಮಾಡುತ್ತಿದ್ದ ಹಂಸವನ್ನು ಮೆಲ್ಲನೆ ಹಿಡಿದು ಅದರ ಎರಡು ಕಾಲು ಗಳನ್ನೂ ತಾವರೆಯ ದಾರದಿಂದ ಬಿಗಿದನು. ಹೆಂಡತಿಯ ಕಡೆ ನೋಡಿ ‘ ಕಟ್ಟಿಹಾಕಿರುವ ಈ ಹಕ್ಕಿಯನ್ನು ನೋಡು. ಶಾಂತನಾದ ತಪಸ್ವಿಯಂತಿದೆ ’ ಎಂದನು. ಆಗ ಆ ಅರಸಂಚೆಯು ಶಾಂಬನನ್ನು ಕುರಿತು ‘ ಅನುಷ್ಠಾನಕ್ಕಾಗಿ ಆನಂದದಿಂದಿದ್ದ ನನ್ನನ್ನು ಹಿಡಿದು ಕಟ್ಟಿದೆಯಾದ್ದರಿಂದ ನೀನೂ ಎರಡು

ತಿಂಗಳು ಬಂಧನದಲ್ಲಿರು. ಮುಂದಿನ ಜನ್ಮದಲ್ಲಿ ನಿನ್ನ ಹೆಂಡತಿಯ ವಿಯೋಗ ಉಂಟಾಗಿ ಮತ್ತೆ ಸಮಾಗಮವಾಗುವುದು' ಎಂದು ಶಪಿಸಿತು. ಶಾಂಬನು ಮತ್ತೆ ಕೇಳಿಕೊಂಡ ಮೇಲೆ ಅನುಗ್ರಹಿಸುತ್ತ ನಿಮ್ಮಿಬ್ಬರಿಗೂ ಮುಂದಿನ ಹುಟ್ಟಿನಲ್ಲೂ ಹಿಂದಿನ ಜನ್ಮದ ಸ್ಮರಣೆಯುಂಟಾಗಲಿ ಎಂದು ಹೇಳಿ ಅದೃಶ್ಯವಾಯಿತು. ಆದ್ದರಿಂದ ಹಂಸವನ್ನು ಕಟ್ಟಬಾರದು."

ರಾಜಪುತ್ರನ ಈ ಮಾತುಗಳನ್ನು ಕೇಳಿ ರಾಜಪುತ್ರಿಗೆ ಹಿಂದಿನ ಹುಟ್ಟಿನ ನೆನಪು ಬಂತು. ತನ್ನ ಪತಿಯೇ ಇವನೆಂದು ಬಗೆದು ಅವನಲ್ಲಿ ಪ್ರೇಮವ ನ್ನಿಟ್ಟಳು. ಮಗಳ ಆಟಪಾಟಗಳನ್ನು ನೋಡಲು ಬರುತ್ತಿದ್ದ ರಾಣಿಯನ್ನು ಕಂಡು ಮಿತ್ರ ಸಹಿತನಾದ ರಾಜಪುತ್ರನು ಗಿಡದ ಮರೆಯಲ್ಲಿ ನಿಂತನು. ಮನೆಗೆ ಹಿಂತಿರುಗಿದ ತಾಯಿ ಮಗಳನ್ನು ಹಿಂಬಾಲಿಸುವಂತೆ ಹೇಳಿದಳು. ಗತ್ಯಂತರವಿಲ್ಲದೆ ಅರಗುವರಿಯು "ರಾಜಹಂಸ ಕುಲಶ್ರೇಷ್ಠನೇ, ಆಡಲು ನನ್ನ ಸಮೀಪಕ್ಕೆ ಬಂದ ನಿನ್ನನ್ನು ಬಿಟ್ಟು ತಾಯಿಯನ್ನು ಹಿಂಬಾಲಿಸುತ್ತಿರುವ ನನ್ನಲ್ಲಿ ಪ್ರೀತಿಯನ್ನು ಮಾಡದಿರಬೇಡ" ಎಂದು ಹಂಸಕ್ಕೆ ಹೇಳುವಳಂತೆ ಹೇಳುತ್ತ ಹೊರಟುಹೋದಳು.

ಅಂತಃಪುರದಲ್ಲಿಯೂ ಅವಳ ಮನಸ್ಸಿಗೆ ಶಾಂತಿಯಿರಲಿಲ್ಲ. ಗೆಳತಿ ಯಿಂದ ರಾಜಪುತ್ರನ ಎಲ್ಲ ವಿಷಯಗಳನ್ನೂ ತಿಳಿದು ವಿರಹವೇದನೆಗೊಳ ಗಾದಳು. ಅವಳ ಮನೋರಥವನ್ನು ಪೂರೈಸಲು ಬಾಲಚಂದ್ರಿಕೆಯು ಮನಸ್ಸು ಮಾಡಿದಳು. ಅವಳು ರಾಜಕುಮಾರಿಯು ಬರೆದಿದ್ದ ಪತ್ರವನ್ನು ತಂದು ತಮ್ಮ ಮನೆಯಲ್ಲಿದ್ದ ರಾಜಪುತ್ರನಿಗೆ ತೋರಿಸಿದಳು. ಅವನ್ನೇ ಬಯಸುತ್ತಿದ್ದ ರಾಜಪುತ್ರನು 'ನನ್ನ ಮನಸ್ಸನ್ನೇ ಆಕೆ ಅಪಹರಿಸಿರುವಳು. ಆಕೆಯನ್ನು ಮದುವೆಯಾಗುವ ಉಪಾಯವನ್ನು ಇಷ್ಟರಲ್ಲೇ ಆಲೋಚಿಸುತ್ತೇನೆ. ಆಕೆಗ ಧೈರ್ಯ ಹೇಳು" ಎಂದು ಹೇಳಿಕಳುಹಿಸಿದನು.

ಹೀಗೆ ಈರ್ವರ ಮನವೂ ಒಮ್ಮನವಾಯಿತು. ಶತ್ರು ರಾಜಪುತ್ರಿ ಯನ್ನು ಮದುವೆಯಾಗುವ ಉಪಾಯವನ್ನು ಕಾಣದೆ ರಾಜವಾಹನನು ಕಳ ವಳಗೊಂಡನು. ಮನೆಯಲ್ಲಿ ನಿಲ್ಲಲಾರದೆ ಪುನಃ ಅದೇ ಉದ್ಯಾನಕ್ಕೆ ಮಿತ್ರ ನೊಡನೆ ಬಂದನು. ಹಿಂದಿನ ದಿನ ನಡೆದ ಎಲ್ಲ ವಿಷಯಗಳನ್ನೂ ನೆನೆಸಿ ಕೊಳ್ಳುತ್ತಿದ್ದನು. ಮಂದ ಮಾರುತದಿಂದ ಅಲುಗಾಡುತ್ತಿದ್ದ ಮಾವಿನ

ತಳಿರನ್ನು ನೋಡಿ ಹೆದರಿದನು. ಮನ್ಮಥನ ದೂತರಂತಿರುವ ಕೋಗಿಲೆ, ಗಿಳಿ, ದುಂಬಿಗಳ ಇಂಚರವನ್ನು ಕೇಳುತ್ತಿದ್ದನು. ಮನ್ಮಥವಿಕಾರಕ್ಕೆ ಸಿಕ್ಕಿ ಎಲ್ಲಿಯೂ ನಿಲ್ಲಲಾರದೆ ವನವೆಲ್ಲ ತೊಳಲಿದನು.

ದೈವವು ಅನುಕೂಲವಾಗಿದ್ದರೆ ಎಲ್ಲ ಸಹಾಯಗಳೂ ತಾನಾಗಿಯೇ ಒದಗುವುವು. ರಾಜವಾಹನನ ಮೂರ್ತಿವೆತ್ತ ಅನುಕೂಲ ದೈವವೋ ಎಂಬಂತೆ ವಿದ್ಯೇಶ್ವರನೆಂಬ ಒಬ್ಬ ಐಂದ್ರಜಾಲಿಕನು ಆ ಮಾರ್ಗವಾಗಿ ಬಂದನು. ಅವನು ಕಿವಿಗಳಲ್ಲಿ ಹೊಳೆಯುವ ಕುಂಡಲಗಳನ್ನು ಧರಿಸಿದ್ದನು. ತೆಳುವಾದ ಚಿತ್ರಬಣ್ಣದ ಬಟ್ಟೆಯನ್ನುಟ್ಟಿದ್ದನು. ಕುಳಿತಿದ್ದ ರಾಜವಾಹನನನ್ನು ನೋಡಿ ಆಶೀರ್ವಾದ ಮಾಡಿದನು. ಈ ಅಪರಿಚಿತನು ಯಾರೆಂದು ರಾಜಪುತ್ರನಿಗೆ ತಿಳಿಯಲಿಲ್ಲ. ಆದರೆ ಪ್ರಶ್ನೆಗೆ ಉತ್ತರವಾಗಿ ರಾಜರ ಮನೋರಂಜನೆಗೆ ಐಂದ್ರಜಾಲಿಕ ವಿದ್ಯೆಯನ್ನು ತೋರಿಸುತ್ತ ಊರೂರು ಸುತ್ತುತ್ತ ಉಜ್ಜಯಿನಿಗೆ ಬಂದ ಬ್ರಾಹ್ಮಣನೆಂದು ಮಾತ್ರ ತಿಳಿಯಿತು. ಆ ಬ್ರಾಹ್ಮಣನಾದರೋ ಸುಮ್ಮನಿರದೆ ರಾಜಪುತ್ರನ ಉದ್ವೆಗಕ್ಕೆ ಕಾರಣವನ್ನು ಕೇಳಿದನು. ಪುಷ್ಪೋದ್ಭವನು ಇವನಿಂದ ಏನಾದರೂ ಸಹಾಯವಾಗಬಹುದೆಂದು ಬಯಸಿ ಇದ್ದ ಸಂಗತಿಯೆಲ್ಲವನ್ನೂ ತಿಳಿಸಿದನು. ವಿಷಯವನ್ನು ಅರಿತ ವಿದ್ಯೇಶ್ವರನು ಮುಗುಳುನಗೆಯಿಂದ ರಾಜಪುತ್ರನ ಕಡೆ ನೋಡಿ "ತಮ್ಮ ಸೇವಕನಾದ ನಾನಿರುವಾಗ ತಮಗೆ ಅಸಾಧ್ಯವಾವುದು ? ' ನನ್ನ ಇಂದ್ರಜಾಲ ವಿದ್ಯೆಯಿಂದ ಮಾಲವ ರಾಜನನ್ನೇ ಮೋಹಗೊಳಿಸಿ ಪಟ್ಟಣಿಗರೆದುರಿನಲ್ಲೇ ನಿಮ್ಮಿಬ್ಬರ ವಿವಾಹವನ್ನು ನೆರವೇರಿಸಿ ಅಂತಃಪುರ ಪ್ರವೇಶಕ್ಕೆ ಅನುಕೂಲ ಮಾಡಿಕೊಡುವೆನು. ಆದರೆ ಈ ವಿಷಯವನ್ನು ಮೊದಲೇ ರಾಜಕುಮಾರಿಗೆ ಗೆಳತಿಯ ಮೂಲಕ ತಿಳಿಸಿರುವುದು ಆವಶ್ಯಕ'ವೆಂದು ನುಡಿದನು. ಆಕಸ್ಮಿಕ ಮಿತ್ರನನ್ನು ಕಂಡು ಸಂತೋಷಪಟ್ಟ ರಾಜಪುತ್ರನು ಮೆಚ್ಚುಗೊಟ್ಟು ಅವನನ್ನು ಬೀಳ್ಕೊಟ್ಟನು. ತನ್ನ ಮನೋರಥವು ಫಲಿಸಿತೆಂದೇ ತಿಳಿದು ಬಾಲಚಂದ್ರಿಕೆಯ ಮೂಲಕ ವಿವಾಹೋಪಾಯವನ್ನು ರಾಜಪುತ್ರಿಗೆ ತಿಳಿಯಪಡಿಸಿದನು.

ಮಾರನೆಯ ದಿನ ಅರಮನೆಯಲ್ಲಿ ಮಹಾಸಂಭ್ರಮ. ಐಂದ್ರಜಾಲಿಕನ ಕೌಶಲ್ಯವನ್ನು ನೋಡಲು ಅಂತಃಪುರ ಸ್ತ್ರೀಯರೊಂದಿಗೆ ಮಾಲವರಾಜನೂ

ಸಿದ್ಧನಾಗಿದ್ದನು. ಅವಂತಿಸುಂದರಿಯು ಮಾತ್ರ ಯಾವುದೋ ನೆವವನ್ನು ಹೇಳಿ ಅಂತಃಪುರದಲ್ಲಿಯೇ ಉಳಿದಿದ್ದಳು. ವಿದ್ಯೇಶ್ವರನ ಪರಿಜನರು ವಾದ್ಯ ಗಳನ್ನು ಬಾರಿಸುತ್ತಿದ್ದರು. ಕೋಗಿಲೆಯ ಕಂಠದಿಂದ ಗಾಯಕಿಯರು ಹಾಡುತ್ತಿದ್ದರು. ಸಭಿಕರೆಲ್ಲರೂ ಆಟದಲ್ಲಿ ಕುತೂಹಲಿಗಳಾಗಿ ಐಂದ್ರಜಾಲಿ ಕನು ನವಿಲುಗರಿಯನ್ನು ಆಡಿಸಿದಂತೆಲ್ಲಾ ಇಮ್ಮಡಿಯ ಉತ್ಸಾಹದಿಂದ ಅತ್ತ ಕಡೆಯೇ ನೋಡುತ್ತಿದ್ದರು. ತನ್ನ ಪರಿಜನರನ್ನು ಸುತ್ತುವಂತೆ ಮಾಡಿ ವಿದ್ಯೇಶ್ವರನು ಕ್ಷಣಕಾಲ ಕಣ್ಣುಮುಚ್ಚಿ ಕುಳಿತನು. ಸ್ವಲ್ಪ ಹೊತ್ತಿನಲ್ಲಿಯೇ ಭಯಂಕರ ವಿಷವನ್ನುಗುಳುವ, ಹೆಡೆಗಳ ರತ್ನಗಳ ನಾಲಗೆಗಳಿಂದ ಅರಮನೆ ಯನ್ನೇ ಬೆಳಗುವ ಹಾವುಗಳು ಎಲ್ಲೆಲ್ಲೂ ಸರಿದಾಡಲಾರಂಭಿಸಿದುವು. ಅನೇಕ ಹದ್ದುಗಳು ಹಾವುಗಳನ್ನು ಕೊಕ್ಕಿನಲ್ಲಿ ಹಿಡಿದು ಆಕಾಶಕ್ಕೆ ಹಾರುತ್ತಿದ್ದುವು. ನರಸಿಂಹನು ಅಟ್ಟಿಕೊಂಡು ಹೋಗಿ ಹಿರಣ್ಯಕಶಿಪುವನ್ನು ಹಿಡಿದು ಉಗುರು ಗಳಿಂದ ಅವನ ಎದೆಯನ್ನು ಒಗೆಯುತ್ತಿದ್ದನು. ಇವುಗಳನ್ನು ನೋಡುತ್ತಿದ್ದ ರಾಜನು ಆಶ್ಚರ್ಯಚಕಿತನಾಗಿದ್ದನು. ವಿದ್ಯೇಶ್ವರನು "ರಾಜನೇ, ಆಟದ ಕೊನೆಯಲ್ಲಿ ಶುಭವನ್ನೊಂದನ್ನು ತೋರಿಸುತ್ತೇನೆ. ನಿನ್ನ ಮಗಳಂತಿರುವ ತರುಣಿಯೊಬ್ಬಳಿಗೆ ಸುಲಕ್ಷಣನಾದ ರಾಜಪುತ್ರನೊಂದಿಗೆ ಮದುವೆಯನ್ನು ಮಾಡಿ ತೋರಿಸಿ ಆಟವನ್ನು ಮುಗಿಸುತ್ತೇನೆ." ಎಂದನು. ರಾಜನು ಒಪ್ಪಿದ ಕೂಡಲೇ ವಿದ್ಯೇಶ್ವರನು ಎಲ್ಲರನ್ನೂ ಮೋಹಗೊಳಿಸುವ ಅಂಜನವನ್ನು ಕಣ್ಣಿಗೆ ಹಚ್ಚಿಕೊಂಡು ಸುತ್ತಲೂ ನೋಡಿದನು. ಎಲ್ಲರೂ ಇದು ಯಕ್ಷಿಣೀ ಆಟವೆಂದು ಬಗೆದು ಆಶ್ಚರ್ಯದಿಂದ ನೋಡುತ್ತಿದ್ದರು. ಮೊದಲೇ ತಿಳಿಸಿ ದ್ದಂತೆ ಮದುವಣಗಿತ್ತಿಯಂತೆ ಅಲಂಕೃತಳಾದ ಅವಂತಿ ಸುಂದರಿಯು ರಂಗ ಮಂಟಪಕ್ಕೆ ಬಂದಳು. ರಾಜವಾಹನನೂ ಬಂದನು. ಪುರೋಹಿತರನ್ನು ಬರಮಾಡಿಸಿ ಅಗ್ನಿಸಾಕ್ಷಿಕವಾಗಿ ಅವರಿಬ್ಬರಿಗೂ ಶಾಸ್ತ್ರವಿಧಿಗನುಸಾರವಾಗಿ ವಿದ್ಯೇಶ್ವರನು ಮದುವೆ ಮಾಡಿಸಿದನು. "ಎಲ್ಲ ಐಂದ್ರಜಾಲಿಕ ಪುರುಷರೂ ಹೊರಟುಹೋಗಿ" ಎಂದ ಕೂಡಲೇ ಮಾಯಾ ಮನುಷ್ಯರು ಹೋಗುವಂತೆ ಅವಂತಿಸುಂದರೀ ರಾಜವಾಹನರು ಅಂತಃಪುರವನ್ನು ಪ್ರವೇಶಿಸಿದರು. ವಿದ್ಯೇಶ್ವರನು ವಿದ್ಯೆಗೆ ಮೆಚ್ಚಿದ ಮಾಲವರಾಜನಿಂದ ಬಹುಮಾನ ಪಡೆದು ಹೊರಟುಹೋದನು.

ಹೀಗೆ ಸಫಲಮನೋರಥನಾದ ರಾಜವಾಹನನು ನೂತನ ವಧುವಿನೊಂದಿಗೆ ವಿಹರಿಸುತ್ತಾ ಕಾಲಕಳೆಯುತ್ತಿದ್ದನು. ರಾಜಪುತ್ರಿಗೆ ವಿಶ್ವಾಸವನ್ನು ಹುಟ್ಟಿಸಲು ಆಶ್ಚರ್ಯಕರಗಳಾದ ಹದಿನಾಲ್ಕು ಲೋಕಗಳ ಕತೆಗಳನ್ನು ಹೇಳುತ್ತ ಅಂತಃಪುರದಲ್ಲಿಯೇ ಇದ್ದನು.

೫

ಮಾನಸಾರನು ಮುದುಕನಾಗಿದ್ದುದರಿಂದ ಅವನ ಮಗ ದರ್ಪಸಾರನೇ ಈಗ ಮಾಲವಾಧಿಪತಿಯಾಗಿದ್ದನು. ಅವನೂ ರಾಜ್ಯವನ್ನು ಚಂಡವರ್ಮನೆಂಬ ಮಂತ್ರಿಗೆ ವಹಿಸಿ ಈಶ್ವರನನ್ನು ಕುರಿತು ತಪಸ್ಸುಮಾಡಲು ಕೈಲಾಸ ಪರ್ವತಕ್ಕೆ ಹೋಗಿದ್ದನು. ಚಂಡವರ್ಮನ ಅಧಿಕಾರಕ್ಕೆ ರಾಜ್ಯದಲ್ಲಿ ಅಡ್ಡಿ ಇರಲಿಲ್ಲ. ದರ್ಪಸಾರನು ತನ್ನನ್ನು ಪ್ರೀತಿಸುತ್ತಿದ್ದುದರಿಂದ ರಾಜಪುತ್ರಿಯಾದ ಅವಂತಿಸುಂದರಿಯು ತನ್ನವಳೇ ಎಂದವನು ಬಗೆಯುತ್ತಿದ್ದನು. ಅಲ್ಲದೆ ಅಂಗದೇಶಾಧಿಪತಿಯಾದ ಸಿಂಹವರ್ಮನ ಏಕಮಾತ್ರ ಪುತ್ರಿಯಾದ ಅಂಬಾಲಿಕೆಯನ್ನು ತನಗೆ ಮದುವೆ ಮಾಡಿಕೊಡುವಂತೆ ಅವನನ್ನು ಚಂಡವರ್ಮನು ಪ್ರಾರ್ಥಿಸಿದ್ದನು. ಕ್ರೂರಿಯಾದವನು ತನಗೆ ಅಳಿಯನಾಗುವುದು ಸಿಂಹವರ್ಮನಿಗೆ ಇಷ್ಟವಿರಲಿಲ್ಲ. ಆದ್ದರಿಂದ ಅವನು ಇವನ ಪ್ರಾರ್ಥನೆಯನ್ನು ನಿರಾಕರಿಸಿದನು. ಇದನ್ನೇ ನೆಪಮಾಡಿಕೊಂಡು ಅಂಗದೇಶದ ರಾಜಧಾನಿಯಾದ ಚಂಪಾ ಪಟ್ಟಣವನ್ನು ಮುತ್ತಲು ಚಂಡವವರ್ಮನು ಹವಣಿಸುತ್ತಿದ್ದನು.

ಈ ವೇಳೆಗೆ ಸರಿಯಾಗಿ ಅಂತಃಪುರದ ಆಳುಗಳು ಚಂಡವರ್ಮನ ಒಳಿಗೆ ಓಡಿಬಂದರು. ಅವರ ಮುಖದಲ್ಲಿ ಗಾಬರಿ ಮತ್ತು ಆಶ್ಚರ್ಯಗಳೆರಡೂ ಮನೆಮಾಡಿಕೊಂಡಿದ್ದಂತೆ ಭಾಸವಾಗುತ್ತಿತ್ತು. ಅವರ ಮಾತು ತೊದಲುತ್ತಿದ್ದುದರಿಂದ ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲ. ಮಂತ್ರಿಯ ಬಳಿಗೆ ಬಂದ ಅವರು ಕೈಜೋಡಿಸಿ "ಪ್ರಭೋ, ಅಂತಃಪುರದಲ್ಲಿ ಒಬ್ಬ ಮಾಯಾವಿ ಬ್ರಾಹ್ಮಣನು ಬಂದು ಸೇರಿದ್ದಾನೆ. ಅವನ ಮುಖದಲ್ಲಿ ರಾಜಪುತ್ರನ ಕಳೆಯು ಕಣ್ಗೊಳಿಸುತ್ತಿದೆ. ಅವನ ಕಾಲುಗಳೆರಡರಲ್ಲೂ ಬೆಳ್ಳಿಯ

+

ಸಂಕೋಲೆಗಳು ಬಿದ್ದಿವೆ. ಅವನಲ್ಲಿ ಅನುರಕ್ತಳಾದ ರಾಜಪುತ್ರಿಯು ಈ ಆಕಸ್ಮಿಕಕ್ಕೆ ಕಾರಣವನ್ನರಿಯದೆ ಕೂಗಿಕೊಳ್ಳುತ್ತಿದ್ದಾಳೆ. ಆ ಪುರುಷನು ಅಂತಃಪುರವನ್ನು ಹೋಗಿ ಪ್ರವೇಶಿಸಿದನೆಂಬುದೇ ಊಹಿಸಲಾಗದ ವಿಷಯ ವಾಗಿದೆ. ಕಂಡ ವಿಷಯವನ್ನು ಸ್ವಾಮಿಯವರಲ್ಲಿ ಬಿನ್ನವಿಸಿಕೊಂಡಿದ್ದೇವೆ" ಎಂದು ಗಾಬರಿಯಿಂದ ನುಡಿದರು.

ಚಂಡವರ್ಮನ ಆಶಾಲತೆಗೆ ಸಿಡಿಲು ಬಡಿದಂತಾಯಿತು. ಅವನು ಕಳ ವಳಗೊಂಡ ಮನಸ್ಸಿನಿಂದ ಕ್ಷಣಕಾಲ ಸಹ ನಿಲ್ಲದೆ ಅಂತಃಪುರದ ಕಡೆಗೆ ನುಗ್ಗಿದನು. ಕೋಪದಿಂದ ಅವನ ರಕ್ತವು ಕುದಿಯುತ್ತಿತ್ತು. ಕೆಂಪಡರಿದ ಕಣ್ಣುಗಳಿಂದ ಕೆಂಡವನ್ನು ಕಾರುತ್ತಾ ಅವನು ಆ ಬ್ರಾಹ್ಮಣವೇಷಧಾರಿಯನ್ನೇ ದಿಟ್ಟಿಸಿ ನೋಡಿದನು. ಅವನ ಮುಖವು ಸ್ವಲ್ಪ ಪರಿಚಿತವಾಗಿದ್ದಂತೆ ಕಾಣಿಸಿತು. ಪುಷ್ಪೋದ್ಭವನ ಒಡನಾಡಿಯೂ ಸಕಲ ಕಲಾಕುಶಲನೆಂದು ಪ್ರಸಿದ್ಧನೂ ಆಗಿದ್ದ ಬ್ರಾಹ್ಮಣವೇಷಧಾರಿಯೇ ಅವನೆಂದು ಗುರುತಿಸಿದನು. ಇಷ್ಟೊಂದು ಚಪಲನಾದ ಆ ಬ್ರಾಹ್ಮಣಾಧಮನನ್ನು ದೇವತೆಯೆಂದು ತಿಳಿದ ಪಟ್ಟಣಿಗರ ಮೌಢ್ಯಕ್ಕೆ ಆಶ್ಚರ್ಯಪಟ್ಟನು. "ಆಃ! ನನ್ನಂತಹ ಪುರುಷ ಶ್ರೇಷ್ಠನಿದ್ದೂ ನನ್ನಲ್ಲಿ ತಿರಸ್ಕಾರಭಾವದಿಂದ ಪಾಪಿಯಾದ ಅವಂತಿಸುಂದರಿಯು ಮೋಸಗಾರನೂ, ಒಳಗೇ ಪಾಪವನ್ನು ಮಾಡುವ ಸ್ವಭಾವದವನೂ, ಚಪಲನೂ ಆದ ಇವನಲ್ಲಿ – ಈ ಬ್ರಾಹ್ಮಣಾಧಮನಲ್ಲಿ – ಅನುರಕ್ತಳಾದಳೇ! ಇರಲಿ. ಈ ದುಷ್ಟೆಯು ತನ್ನ ಅಪಾತ್ರಾನುರಾಗಕ್ಕೆ ತಕ್ಕ ಫಲವನ್ನು ಈಗಲೇ ಕಾಣುವಳು. ಶೂಲಾಲಂಕೃತನಾದ ತನ್ನ ಪತಿಯನ್ನು ನೋಡಿ ಕಣ್ಣಿಗೆ ಹಬ್ಬವನ್ನು ಮಾಡಿಕೊಳ್ಳಲಿ." ಎಂದು ಮುಂತಾಗಿ ಪ್ರಲಪಿಸುತ್ತಾ ಹುಬ್ಬು ಗಂಟಿಟ್ಟನು. ಭಯಂಕರವಾದ ಮುಖವುಳ್ಳವನಾಗಿ ಅವನು ಯಮದಂಡ ದಂತಿರುವ ತನ್ನ ತೋಳಿನಿಂದ ರಾಜಪುತ್ರನ ಕೈಯನ್ನು ಹಿಡಿದೆಳೆದನು. ಪ್ರತೀಕರಿಸಲಾಗದ ದೈವಿಕವಾದ ಆ ಆಪತ್ತಿಗಾಗಿ ನೊಂದ ರಾಜಪುತ್ರನು ಸಹಜವಾದ ಧೈರ್ಯವನ್ನು ತಂದುಕೊಂಡು ಸಹನೆಯೇ ತಕ್ಕ ಪ್ರತೀಕಾರ ವೆಂದು ತಿಳಿದನು. "ಅಂಚೆ ನಡೆಯವಳೇ, ಅಂಚೆಕತೆಯನ್ನು ನೆನೆಸಿಕೊ. ಎರಡು ತಿಂಗಳು ಮಾತ್ರ ಸಹಿಸು." ಎಂದು ಮನದನ್ನೆಯನ್ನು ಸಮಾಧಾನ ಪಡಿಸಿ ಶತ್ರುವಶನಾದನು. ರಾಜಪುತ್ರನನ್ನು ಶೂಲಕ್ಕೆ ಏರಿಸಬೇಕೆಂದಿದ್ದ

ಚಂಡವರ್ಮನ ಮನೋರಥವನ್ನು ಮಾನಸಾರ ದಂಪತಿಗಳು ನಡೆಯ ಗೊಡಲಿಲ್ಲ. ಅಳಿಯನ ರೂಪವನ್ನು ನೋಡಿ ಅವರಿಬ್ಬರೂ ಮುಗ್ಧರಾದರು. ಆದರೆ ತಮಗೆ ಅಧಿಕಾರವಿಲ್ಲದಿದ್ದುದರಿಂದ ಅವರು ಅಳಿಯನನ್ನು ಸೆರೆಯಿಂದ ಬಿಡಿಸಲಾರದೆ ಹೋದರು. ಚಂಡವರ್ಮನೂ ನಡೆದ ಸಮಾಚಾರವನ್ನು ತಪಸ್ಸುಮಾಡುತ್ತಿದ್ದ ದರ್ಪಸಾರನಿಗೆ ತಿಳಿಸಿ ಅವನಿಂದ ಉತ್ತರವನ್ನು ನಿರೀಕ್ಷಿಸುತ್ತಿದ್ದನು.

ಹೆಂಡತಿಯನ್ನಗಲಿದ ರಾಜಪುತ್ರನು ಪಂಜರದಲ್ಲಿದ್ದ ಸಿಂಹದ ಮರಿ ಯಂತೆ ಸೆರೆಯಲ್ಲಿ ಕಾಲಕಳೆಯುತ್ತಿದ್ದನು. ತಲೆಗೂದಲ ಮಧ್ಯದಲ್ಲಿ ಅಡಗಿ ಸಿಟ್ಟಿದ್ದ ಚೂಡಾಮಣಿಯಿಂದ ರಕ್ಷಿತನಾದ ಅವನಿಗೆ ಹಸಿವೆ ನೀರಡಿಕೆಗಳ ಬಾಧೆಯೆಲ್ಲಿಂದ ಬಂತು ?

ಈಗ ಚಂಡವರ್ಮನ ಮನಸ್ಸು ಅಂಬಾಲಿಕೆಯತ್ತ ತಿರುಗಿತು. ಅವಂತಿ ಸುಂದರಿಯು ಕೈತಪ್ಪಿ ಹೋದಂತೆ ಅಂಬಾಲಿಕೆಯೂ ಎಲ್ಲಿ ಮತ್ತೊಬ್ಬರ ಪಾಲಾಗುವಳೋ ಎಂದವನು ಭೀತನಾದನು. ಅಂಗರಾಜನಾದ ಸಿಂಹ ವರ್ಮನು ಇವನ ಬೆದರಿಕೆಗಳಿಗೆ ಸಗ್ಗಲಿಲ್ಲವಾದ್ದರಿಂದ ಕಾಳಗದ ಹೊರತು ಬೇರೆ ಮಾರ್ಗವೇ ಅವನಿಗೆ ತೋರಲಿಲ್ಲ. ಸೈನ್ಯಾಧಿಪತಿಯ ಸಲಹೆಯಂತೆ ಅವನು ದೊಡ್ಡ ಸೈನ್ಯವೊಂದಿಗೆ ಅಂಗದೇಶದ ಕಡೆಗೆ ಹೊರಟು ಚಂಪಾ ನಗರವನ್ನು ಮುತ್ತಿದನು. ಸೆರೆಯಲ್ಲಿದ್ದ ರಾಜಪುತ್ರನನ್ನು ಉಜ್ಜಯಿನಿಯಲ್ಲಿ ಬಿಟ್ಟುಹೋದರೆ ಎಲ್ಲಿಯಾದರೂ ತಪ್ಪಿಸಿಕೊಂಡು ಹೋದಾನೆಂಬ ಭಯದಿಂದ ಅವನನ್ನು ತನ್ನ ಸೈನ್ಯದ ಕಾಪಿನಲ್ಲಿ ಚಂಪಾನಗರಕ್ಕೆ ಕರೆದುಕೊಂಡು ಹೋದನು. ಮತ್ತೆ ಯಾವ ಅಧಿಕಾರಿಯಲ್ಲೂ ಅವನಿಗೆ ನಂಬುಗೆಯಿರಲಿಲ್ಲ. ಮಾನಸಾರನ ಬಲಾತ್ಕಾರಕ್ಕೆ ಸಿಕ್ಕಿ ಯಾರಾದರೂ ಅವನನ್ನು ಬಿಟ್ಟು ಬಿಡ ಬಹುದೆಂದವನು ಶಂಕಿಸಿದನು. ದರ್ಪಸಾರನಿಂದ ಉತ್ತರ ಬರುವವರೆಗೂ ತಾನಿದ್ದಲ್ಲಿ ಸೆರೆಯಾಳಾದ ರಾಜಪುತ್ರನೂ ಇರಬೇಕೆಂದು ಅವನು ತನ್ನ ಆಳು ಗಳಿಗೆ ಕಟ್ಟಪ್ಪಣೆಮಾಡಿದನು.

ಸಿಂಹವರ್ಮನೂ ಹೆದರದೆ ಶತ್ರುವನ್ನು ಎದುರಿಸಲು ಮನಸ್ಸು ಮಾಡಿದನು. ತಾನೊಬ್ಬನೇ ಬಲಿಷ್ಠನಾದ ಶತ್ರುವನ್ನು ಎದುರಿಸಲು ಸಾಧ್ಯ ವಿಲ್ಲವೆಂದು ಬಗೆದು ಸ್ನೇಹಿತರಾದ ರಾಜರ ಬಳಿಗೆ ದೂತರನ್ನಟ್ಟಿ ಅವರ

ಸಹಾಯವನ್ನು ಅಪೇಕ್ಷಿಸಿದ್ದನು. ಮಾಲವರಾಜ್ಯದ ಅಭ್ಯುದಯವನ್ನು ಸಹಿಸದ ಎಲ್ಲ ರಾಜಪುತ್ರರೂ ಇದೇ ಸಮಯವೆಂದರಿತು ತಮ್ಮ ತಮ್ಮ ಸೈನ್ಯ ದೊಂದಿಗೆ ಹೊರಟು ಚಂಪಾನಗರದ ಕಡೆಗೆ ಬರುತ್ತಿದ್ದರು. ಮಹಾಧೀರನಾದ ಸಿಂಹವರ್ಮನು ಅವರ ಸಹಾಯ ಸಂಪತ್ತು ಒದಗುವವರೆಗೂ ನಿರೀಕ್ಷಿಸದೆ ಕೂಡಲೇ ಕೋಟೆಯನ್ನು ಭೇದಿಸಿಕೊಂಡು ಹೊರ ಹೊರಟನು. ಗರ್ವವೇ ದೇಹವನ್ನು ಧರಿಸಿ ಬಂದಂತಿದ್ದ ಅವನ ರೂಪು ಅದಕ್ಕೆ ತಕ್ಕ ಉತ್ಸಾಹ, ಉತ್ಸಾಹಕ್ಕೆ ತಕ್ಕ ಬಲ, ಬಲಕ್ಕೆ ತಕ್ಕ ಧೈರ್ಯ ಇವು ಶತ್ರು ಸೈನಿಕರಿಗೆ ಭಯವನ್ನುಂಟುಮಾಡಿದುವು. ಆದರೇನು? ಮಾಲವ ಸಾಮ್ರಾಜ್ಯದ ಸೈನ್ಯ ದೊಂದಿಗೆ ಹೋರಾಡುವುದೆಂದರೆ ಒಬ್ಬ ರಾಜನಿಂದಾಗಲೀ ಒಂದು ರಾಜ್ಯದ ಸೈನ್ಯದಿಂದಾಗಲೀ ಆಗದ ಕೆಲಸ. ಸ್ವಲ್ಪ ಕಾಲದಲ್ಲಿಯೇ ಸಿಂಹವರ್ಮನ ಸಕಲ ಸೈನ್ಯವೂ ಯುದ್ಧಮಾರಿಗೆ ಬಲಿಯಾಯಿತು. ವರ್ಮಮಾತ್ರಾವಶಿಷ್ಟ ನಾದ ಸಿಂಹವರ್ಮನು ಮರ್ಮಸ್ಥಳಗಳಲ್ಲಿ ಪೆಟ್ಟುತಾಗಿ ಶಿಥಿಲವಾದ ಮದಗಜ ದಂತೆ ಚಂಡವರ್ಮನ ಕೈಸರೆ ಸಿಕ್ಕಿದನು. ಅಂಬಾಲಿಕೆಯ ತಂದೆಯಾದ ಸಿಂಹವರ್ಮನನ್ನು ಆ ದುಷ್ಟನು ಕೊಲ್ಲಲಿಳಸಲಿಲ್ಲ. ಆದರೆ ಬಿಟ್ಟುಬಿಡದೆ ರಾಜವಾಹನನಂತೆ ಅವನನ್ನೂ ಸೆರೆಯಲ್ಲಿಟ್ಟನು. ವಿಧಿಯನ್ನು ಮೀರು ವವರಾರು?

ಚಂಡವರ್ಮನ ಸಂಭ್ರಮವಂತೂ ಹೇಳತೀರದು. ಎಂದಿಗೆ ಅಂಬಾ ಲಿಕೆಯನ್ನು ಮದುವೆಯಾಗಿ ಅವಳೊಡನೆ ವಿಹರಿಸುವೆನೆಂದವನು ಹಾತೊರೆ ಯುತ್ತಿದ್ದನು. ಪುರೋಹಿತರನ್ನು ಆಗಲೇ ಬರಮಾಡಿದನು. ಬೆಳಗಿನ ಜಾವದಲ್ಲಿಯೇ ಪ್ರಶಸ್ತ್ರವಾದ ಲಗ್ನವಿದ್ದುದರಿಂದ ರಾಜಪುತ್ರಿಯನ್ನು ಆ ಲಗ್ನ ದಲ್ಲಿಯೇ ಮದುವೆಯಾಗುವಂತೆ ನಿಶ್ಚಯಿಸಿದನು. ಆಗಲೇ ಮಂಗಳ ಸ್ನಾನ ವನ್ನು ಮಾಡಿ ಕೈಗೆ ಕಂಕಣವನ್ನು ಕಟ್ಟಿಕೊಂಡು ಮದುವೆಗೆ ಸಿದ್ಧನಾದನು. ಈ ವೇಳೆಗೆ ಸರಿಯಾಗಿ ದರ್ಪಸಾರನಿಂದ ಉತ್ತರವೂ ಬಂದಿತು. "ಕನ್ಯಾಂತಃ ಪುರವನ್ನೇ ದೂಷಿಸಿದವನಲ್ಲಿ ದಯೆಗೂ ಅವಕಾಶವುಂಟೇ? ಮಾನಾವಮಾನ ಗಳನ್ನು ಲೆಕ್ಕಿಸದ ಮುದಿರಾಜನು ಮಗಳ ಮೇಲಿನ ಮೋಹದಿಂದ ಹೇಳಿ ದ್ದನ್ನೂ ನೀನು ಅನುಸರಿಸಬೇಕೇ? ಕಾಮುಕನಾದ ಅವನ ಚಿತ್ರವಧೆಯನ್ನು ತಿಳಿಸಿ ಜಾಗ್ರತೆಯಾಗಿ ನಮ್ಮ ಕಿವಿಗಳಿಗೆ ಹಬ್ಬವನ್ನಾಗಿಸು" ಎಂಬ ದರ್ಪ

ಸಾರನ ಸಂದೇಶವನ್ನು ಕೇಳಿದ ಕೂಡಲೆ ಅವನು ತಡಮಾಡದೆ ರಾಜ ಪುತ್ರನನ್ನು ಕೊಲ್ಲಲೆಳಸಿದನು. ಮಾವಟಿಗನನ್ನು ಕರೆದು "ಸಕಲ ಸಾಮಗ್ರಿ ಗಳೊಂದಿಗೆ ಚಂಡಪೋತವೆಂಬ ಮದಗಜವನ್ನು ಅರಮನೆಯ ಬಾಗಿಲಲ್ಲಿ ನಿಲ್ಲಿಸು" ಎಂದಾಜ್ಞಾಪಿಸಿದನು. "ಬೆಳಗ್ಗೆ ಬ್ರಾಹ್ಮಣ ವೇಷಧಾರಿಯನ್ನು ಅರಮನೆಯ ಬಾಗಿಲಲ್ಲಿ ನಿಲ್ಲಿಸಿ ಆನೆಯ ಆಟದ ಸಾಮಗ್ರಿಯಾಗಿ ಮಾಡಿ ಮದುವೆ ಮಾಡಿಕೊಂಡು ಬಂದ ನಾನೇ ಅವನನ್ನು ಕೊಲ್ಲಿಸುತ್ತೇನೆ. ಅಂಗ ರಾಜನ ಸಹಾಯಕ್ಕೆ ಬರುತ್ತಿರುವ ರಾಜರನ್ನೂ ಕೈಸೆರೆ ಹಿಡಿಯಲು ಆ ಆನೆ ಯನ್ನೇ ಏರಿ ಮುಂದುವರಿಯುತ್ತೇನೆ" ಎಂದು ಹೇಳುತ್ತ ಪರಿಜನರನ್ನು ನೋಡಿದನು. ಬೆಳಗಿನ ಕೆಂಪು ಇನ್ನೂ ಆಕಾಶವನ್ನಡರಿರಲಿಲ್ಲ. ಅಷ್ಟ ರಲ್ಲಿಯೇ ಚಂಡವರ್ಮನ ಆಣತಿಯಂತೆ ಎಲ್ಲವೂ ಸಿದ್ಧವಾಗಿತ್ತು. ಅರಮನೆಯ ಒಳಗೆ ಮದುವೆಯ ಸಂಭ್ರಮ; ಹೊರಗೆ ರಾಜಪುತ್ರನ ವಧೆಗೆ ಸಿದ್ಧತೆ. ಒಳಗೆ ಸಂತೋಷದ ಸವಿ; ಹೊರಗೆ ದುಃಖದ ಕಹಿ. ಆದರೇನು, ವಿಧಿಯ ನ್ನಾರು ಬಲ್ಲರು? ಮೋದವು ಖೇದಾಂತವಾಗುವುದು, ಖೇದವು ಮೋದಾಂತ ವಾಗುವುದಲ್ಲವೆ!

ಬೆಳ್ಳಿಯ ಸಂಕೋಲೆಗಳಿಂದ ಸಂಕಲಿತ ಚರಣನಾದ ರಾಜವಾಹನನು ಉಷೆಯ ಸೊಬಗನ್ನು ನಿರೀಕ್ಷಿಸುತ್ತಾ ಚಂಪಾರಾಜಧಾನಿಯ ಅರಮನೆಯ ಬಾಗಿಲಲ್ಲಿ ಕುಳಿತಿದ್ದನು. ಮರುಕ್ಷಣದಲ್ಲಿ ಸಾಯುವನಿದ್ದರೂ ಅವನ ಮುಖದಲ್ಲಿ ಉದ್ವೇಗದ ಸೂಚನೆಯೇ ಇರಲಿಲ್ಲ. ಸ್ವಭಾವಧೀರರು ಸಾವಿಗೆ ಹೆದರುವರೇ?! ಆದರೂ ಮಂತ್ರಹತವಾದ ಹಾವಿನಂತೆ ಅವನು ಶಕ್ತಿಗುಂದಿ ದ್ದನು. ಇದ್ದಕ್ಕಿದ್ದಂತೆಯೇ ಅವನ ಕಣ್ಣುಗಳು ಅರಳಿದುವು. ತನ್ನ ಎದುರಿ ನಲ್ಲಿ ನಿಂತಿದ್ದ ತೇಜಃಪುಂಜರಂಜಿತಳಾದ ಸ್ತ್ರೀವ್ಯಕ್ತಿಯನ್ನು ದಿಟ್ಟಿಸಿ ನೋಡಿದನು. ಅವಳು ಯಾರೆಂದು ಅವನು ಊಹಿಸದಾದನು. ತನ್ನ ಕಾಲುಗಳನ್ನು ನೋಡಿಕೊಂಡನು. ಬೆಳ್ಳಿಯ ಸಂಕೋಲೆಗಳಿರಲಿಲ್ಲ. ಎಂದಿ ನಂತೆ ಸ್ವತಂತ್ರನಾಗಿದ್ದನು. ಅವನು ಆಶ್ಚರ್ಯದಿಂದ ಬೆರಗುವಡೆದು ಸುತ್ತ ನೋಡುತ್ತಿದ್ದನು. ಎದುರಿನಲ್ಲಿದ್ದ ಸ್ತ್ರೀವ್ಯಕ್ತಿಯು ಅವನಿಗೆ ಬಲವಂದು ಕೈಜೋಡಿಸಿ,

" ದೇವ, ಪ್ರಸನ್ನನಾಗು " ಎಂದಳು.

" ನೀನು ಯಾರು ?"

" ನಾನು ಸುರತರು ಮಂಜರಿಯೆಂಬ ಚಂಪ್ರಕಿರಣ ಕುಲದ ಅಪ್ಸರೆ.

" ಇಲ್ಲಿಗೇತಕ್ಕೆ ಬಂದೆ ?"

" ವೀರಶೇಖರನೆಂಬ ವಿದ್ಯಾಧರನು ಬೆಳ್ಳಿಯ ಸಂಕೋಲೆಯಾಗಿದ್ದ ನನ್ನನ್ನು ನಿನ್ನ ಕಾಲುಗಳಲ್ಲಿ ಬಿಗಿದುಹೋದನು."

" ನೀನು ಸಂಕೋಲೆಯಾಗಿ ಬೀಳಲು ಕಾರಣವೇನು ?"

" ಮಾರ್ಕಂಡೇಯ ಮಹರ್ಷಿಗಳ ಶಾಪ."

" ಮುನಿಗಳು ನಿಷ್ಕಾರಣವಾಗಿ ಮುನಿವರೇ ?"

" ಆಕಾಶದಲ್ಲಿ ಹೋಗುತ್ತಿದ್ದಾಗ ಕಲಹಂಸವೊಂದು ಕಮಲವೆಂದು ನನ್ನ ಮುಖವನ್ನು ಅಟ್ಟಿಕೊಂಡು ಬಂತು. ಅದನ್ನು ಓಡಿಸುವ ರಭಸದಲ್ಲಿ ನನ್ನ ಮುತ್ತಿನಹಾರವು ಕಡಿದು ಸ್ನಾನದಿಂದೇಳುತ್ತಿದ್ದ ಮುನಿವರನ ತಲೆಯ ಮೇಲೆ ಬಿತ್ತು."

" ಸುಲಭ ಕೋಪರಲ್ಲವೇ ಋಷಿಗಳು !"

" ಲೋಹವಾಗೆಂದು ನನ್ನನ್ನು ಶಪಿಸಿದ ಮುನಿವರನು ಮತ್ತೆ ಪ್ರಸನ್ನನಾಗಿ ನಿನ್ನ ಕಾಲುಗಳ ಸಂಕಲೆಯಾಗಿ ಎರಡು ತಿಂಗಳು ಮಾತ್ರ ಇರುವಂತೆ ನನ್ನನ್ನು ಅನುಗ್ರಹಿಸಿದನು.

" ವೀರಶೇಖರನು ನನ್ನ ಕಾಲುಗಳನ್ನು ಸಂಕೋಲೆಗಳಿಂದ ಬಿಗಿದುದೇತಕ್ಕೆ ?"

" ಕೈಲಾಸ ಪರ್ವತದಲ್ಲಿ ಬೆಳ್ಳಿಯ ಸರಪಣಿಯಾಗಿ ಬಿದ್ದಿದ್ದ ನನ್ನನ್ನು ಅಕಸ್ಮಾತ್ತಾಗಿ ವೀರಶೇಖರನೆಂಬ ವಿದ್ಯಾಧರನು ಹೊಂದಿದನು. ಅವನು ವಿದ್ಯಾಧರ ಚಕ್ರವರ್ತಿಯಾದ ನರವಾಹನ ದತ್ತನನ್ನು ಗೆಲ್ಲಬಯಸಿ ತಪಸ್ಸು ಮಾಡುತ್ತಿದ್ದ ದರ್ಪಸಾರನನ್ನು ಸೇರಿದನು."

" ಶೂರರು ಮತ್ತೊಬ್ಬರ ಉನ್ನತಿಯನ್ನು ಸಹಿಸುವುದಿಲ್ಲ !"

" ದರ್ಪಸಾರನೂ ತನ್ನ ತಂಗಿಯಾದ ಅವಂತಿಸುಂದರಿಯನ್ನು ಅವನಿಗೇ ಕೊಡುತ್ತೇನೆಂದು ವಾಗ್ದಾನಮಾಡಿದನು. ಅಂದು ಮೊದಲುಗೊಂಡು ಅವಂತಿಸುಂದರಿಯನ್ನೇ ಚಿಂತಿಸುತ್ತಿದ್ದ ವಿದ್ಯಾಧರನು ಒಮ್ಮೆ

ಕನ್ಯಾಂತಃಪುರವನ್ನು ತಿರಸ್ಕರಿಣೀ ವಿದ್ಯೆಯಿಂದ ಪ್ರವೇಶಿಸಿ ನಿನ್ನೊಡನೆ ಸುಖವಾಗಿ ಮಲಗಿದ್ದ ರಾಜಪುತ್ರಿಯನ್ನು ಕಂಡನು. ಮಹಾನುಭಾವನಾದ ನಿನ್ನನ್ನು ನಿಗ್ರಹಿಸಲು ಬೇರೆ ಉಪಾಯವನ್ನು ಕಾಣದೆ ನಿನ್ನ ಕಾಲುಗಳನ್ನು ನಸ್ಸಿಂದ ಬಂಧಿಸಿ ಹೊರಟುಹೋದನು."

"ಲೋಹರೂಪವಲ್ಲಿದ್ದ ನಿನಗೆ ಇದೆಲ್ಲವೂ ಹೇಗೆ ಗೊತ್ತು ?"

"ಪ್ರಸನ್ನನಾದ ಮಹರ್ಷಿಯು ನನ್ನ ಇಂದ್ರಿಯ ಶಕ್ತಿಯು ಕುಗ್ಗದಂತೆ ಅನುಗ್ರಹಿಸಿದ್ದನು."

"ಹಾಗಿದ್ದರೆ ಈ ಸಮಾಚಾರವನ್ನು ನನ್ನ ಪ್ರೇಯಸಿಗೆ ತಿಳಿಸಿ ಸಮಾಧಾನ ಪಡಿಸು."

"ಹಾಗೆಯೇ ಆಗಲಿ" ಎಂದಪ್ಸರೆಯು ಅದೃಶ್ಯಳಾದಳು.

ಅಚ್ಚರಸಿಯು ಕಾಣದಂತಾದುದೇ ತಡ. ಎಲ್ಲೆಲ್ಲೂ ತುಂಬಿದ ಕೋಲಾಹಲಧ್ವನಿಯು ಅರಮನೆಯ ಶಾಂತವಾದ ವಾತಾವರಣವನ್ನು ಕ್ಷೋಭೆಗೀಡು ಮಾಡಿತು. ಸೈನಿಕರು ದಿಕ್ಕಾಪಾಲಾಗಿ ಓಡಿಹೋಗುತ್ತಿದ್ದರು. ಮಂಗಳಸದನವಾಗಿದ್ದ ಪ್ರಾಸಾದವು ಅಮಂಗಳ ಸದನವಾಗಿ ಶವಾಗಾರವಾಗಿದ್ದಿತು. ಯಾವನೋ ಒಬ್ಬ ಕಳ್ಳನು ಅರಮನೆಯೊಳಕ್ಕೆ ನುಗ್ಗಿ ಪಾಣಿಗ್ರಹಣಕ್ಕೆಂದು ಚಾಚಿದ್ದ ಚಂಡವರ್ಮನ ಕೈಯನ್ನು ಹಿಡಿದೆಳೆದು ಬಾಕುವಿನಿಂದ ಚುಚ್ಚಿ ಅವನನ್ನು ಕೊಂದು ಹಾಕಿದನೆಂದು ಕೂಗಿಕೊಳ್ಳುತ್ತ ಜನರು ಓಡಿಬರುತ್ತಿದ್ದರು. ಇವನ್ನು ಕೇಳಿದ ರಾಜಪುತ್ರನು ಅದೇ ಆನೆಯನ್ನು ಹತ್ತಿ ಅರಮನೆಯ ಬಳಿಗೆ ಬಂದನು. ತಾನು ಮಾಡಬೇಕೆಂದಿದ್ದ ಕೆಲಸವನ್ನು ನೆರವೇರಿಸಿದ ಮಹಾವೀರನಾರೆಂದು ಹುಡುಕಿದನು. "ಸಾಮಾನ್ಯ ಮನುಷ್ಯರಿಂದ ಸಾಧ್ಯವಲ್ಲದ ಈ ಕೆಲಸವನ್ನು ಮಾಡಿದ ಮಹಾವೀರನು ಯಾರೇ ಆಗಿರಲಿ ನನ್ನ ಬಳಿಗೆ ಬಂದು ಈ ಆನೆಯನ್ನೇರಲಿ. ನನ್ನೊಡನಿರುವ ಅವನನ್ನು ದೇವ ದಾನವರಾರೂ ನಿಗ್ರಹಿಸಲಾರರು" ಎಂದು ಘೋಷಿಸಿದನು. ಇವನ್ನು ಕೇಳಿದ ಆ ಕಳ್ಳನು ಹಿಂದಿನಿಂದಲೇ ಬಂದು ಸನ್ನೆಯಿಂದ ಬಗ್ಗಿದ್ದ ಆನೆಯನ್ನೇರಿದನು. ಆ ವೀರನ ಕೈಗಳೆರಡೂ ರಾಜಪುತ್ರನ ದೇಹವನ್ನೂ ರಾಜಪುತ್ರನ ಕೈಗಳೆರಡೂ ಆ ವೀರನ ದೇಹವನ್ನೂ ಗಾಢವಾಗಿ ಹಿಡಿದುವು. ಅಷ್ಟರಲ್ಲಿ ಓಡಿಹೋಗುತ್ತಿದ್ದ ಮಾಲವ ಸೈನ್ಯವನ್ನು ಎದುರಿಸುತ್ತಾ ಸಿಂಹವರ್ಮನ ಸಹಾಯಕ್ಕೆಂದು

ಬರುತ್ತಿದ್ದ ರಾಜರ ಸೈನ್ಯಗಳು ಮುನ್ನುಗ್ಗುತ್ತಿದ್ದವು. ಚಂಡವರ್ಮನು ಅಳಿದಂತೆ ಅವನ ಸೈನ್ಯವೂ ನಾಮಾವಶೇಷವಾಯಿತು. ಆಗ ರಾಜವಾಹನನು ಹಿಂತಿರುಗಿ ನೋಡಿದನು. ಆ ವೀರನು ಆಪ್ತಮಿತ್ರನಾದ ಅಪಹಾರವರ್ಮನೇ ಆಗಿದ್ದನು. ಬಹು ದಿವಸದಿಂದ ಅಗಲಿದ್ದ ಮಿತ್ರನನ್ನು ಕಂಡ ಅವನ ಆನಂದಕ್ಕೆ ಪಾರವೇ ಇರಲಿಲ್ಲ. ಅಪಹಾರವರ್ಮನೂ ರಾಜವಾಹನನನ್ನು ಗುರುತಿಸಿ ಅಂದಿನ ಪ್ರಭಾತವನ್ನು ಸುಪ್ರಭಾತವೆಂದು ಬಗೆದನು.

ಅವನು ರಾಜಪುತ್ರನಿಗೆ ನಮಸ್ಕರಿಸಿ "ಧನಮಿತ್ರನನ್ನು ಕಳುಹಿಸಿ ಅಂಗರಾಜನನ್ನು ಸೆರೆಯಿಂದ ಬಿಡಿಸಿ ಸಹಾಯಕ್ಕಾಗಿ ಬಂದಿರುವ ಅರಸರೊಂದಿಗೆ ಬರುವಂತೆ ಆಜ್ಞೆಮಾಡಲೇ" ಎಂದನು. ರಾಜಪುತ್ರನು "ನಿನ್ನಿಷ್ಟದಂತೆ ಆಗಲಿ" ಎಂದನು.

೬

ಇತ್ತ ರಾಜಹಂಸನೂ ವಸುಮತಿಯೂ ಒಂದೊಂದು ದಿನವನ್ನೂ ಎಣಿಸುತ್ತ ಹದಿನಾರುವರುಷಗಳು ಎಂದಿಗೆ ಕಳೆದಾವು ಎಂದು ಯೋಚಿಸುತ್ತಿದ್ದರು. ವಿಜಯ ಯಾತ್ರೆಗೆ ಹೊರಟ್ಟಿದ್ದ ರಾಜವಾಹನನ ಸೈನಿಕರು ಹಿಂತಿರುಗಿ ಬಂದು ಎಲ್ಲಿ ಹುಡುಕಿದರೂ ರಾಜವಾಹನನು ಸಿಕ್ಕದಿದ್ದುದನ್ನೂ ಅವನ ಜೊತೆಯ ಕುಮಾರರು "ರಾಜವಾಹನನೊಂದಿಗೇ ನಾವು ರಾಜಹಂಸನನ್ನು ನಮಸ್ಕರಿಸುವೆವು. ಇಲ್ಲವಾದರೆ ನಮ್ಮ ಪ್ರಾಣಗಳನ್ನೇ ಬಿಡುವೆವು." ಎಂದು ಪ್ರತಿಜ್ಞೆಮಾಡಿದ್ದನ್ನೂ ರಾಜಹಂಸನಲ್ಲಿ ವಿಜ್ಞಾಪಿಸಿಕೊಂಡಿದ್ದರು. ರಾಜನಿಗೆ ದಿಕ್ಕು ತೋರದಂತಾಯಿತು. ಏಕಮಾತ್ರ ಪುತ್ರನನ್ನು ಕಾಣದ ವಸುಮತಿಯ ದುಃಖವು ವಸುಮತಿಯಲ್ಲೇ ಹಿಡಿಸಲಾರದುದಾಯಿತು. ವಿಜಯ ಯಾತ್ರೆಯು ಹೋಗಿ ಜವನಗರ ಯಾತ್ರೆಯಾಯಿತೋ ಏನೋ ಎಂಬ ಸಂದೇಹವು ಅವರ ಶೋಕವನ್ನು ಇಮ್ಮಡಿಯಾಗಿ ಮಾಡಿತು. ಕುಮಾರರ ವಿಷಯವನ್ನು ತಿಳಿಯಬೇಕೆಂದು ಕಾತುರವಾಗಿದ್ದ ಅವರ ಮನಸ್ಸು ಅವರನ್ನು ಸುಮ್ಮನಿರಿಸದೆ ವಾಮದೇವ ಋಷಿಗಳ ಬಳಿಗೆ ಕರೆತಂದಿತು. ತ್ರಿಕಾಲ

ಜ್ಞಾನಿಗಳಾದ ಮಹರ್ಷಿಗಳೇ ಅಲ್ಲವೇ ಶೋಕಸಂತಪ್ತರನ್ನೂ ಸಮಾಧಾನ ಪಡಿಸುವ ಕಾರ್ಮೋಡಗಳು !

ಆಹ್ನಿಕಗಳನ್ನು ತೀರಿಸಿಕೊಂಡು ವಾಮದೇವ ಋಷಿಗಳು ಪ್ರಣಿಧಾನ ಮನಸ್ಕರಾಗಿದ್ದರು. ರಾಜದಂಪತಿಗಳು ಅವರನ್ನು ಭಕ್ತಿಯಿಂದ ಬಲವಂದು ಪೊಡಮಟ್ಟು ದೂರದಲ್ಲಿ ಕುಳಿತರು. ಇವರು ಬಂದುದಾಗಲಿ ಬಂದಕಾರಣ ವಾಗಲಿ ಮಹರ್ಷಿಗಳಿಗೆ ಗೋಚರವಾಗದೆ ಇರಲಿಲ್ಲ. ತಪಸ್ಸಿಗೆ ದೊರೆಕದ ಸಿದ್ಧಿಯಾವುದು ? ಸಮಾಧಿಯಿಂದೆದ್ದ ಋಷಿವರರು ತಾವಾಗಿಯೇ " ರಾಜನೇ ! ಸತಿಯೊಡನೆ ನೀನಿಲ್ಲಿಗೆ ಬಂದುದಕ್ಕೆ ಕಾರಣವನ್ನು ನಾನು ಬಲ್ಲೆ. ನಿನ್ನ ಏಕಮಾತ್ರ ಪುತ್ರನೂ ಅವನ ಗೆಳೆಯ ಕುಮಾರರೂ ಸ್ವಲ್ಪಕಾಲ ಕಷ್ಟಗಳನ್ನು ಅನುಭವಿಸಿ ತಮ್ಮ ಅಸಾಧಾರಣ ಪರಾಕ್ರಮದಿಂದ ದಿಗ್ವಿಜಯವನ್ನು ಪೂರೈಸಿ ಕೊಂಡು ದೊಡ್ಡ ದೊಡ್ಡ ರಾಜ್ಯಗಳನ್ನು ಸಂಪಾದಿಸಿ ಹದಿನಾರು ವರ್ಷಗಳ ಅನಂತರ ವಿಜಯಶೀಲನಾದ ರಾಜವಾಹನನೊಂದಿಗೆ ಸುಖವಾಗಿ ಹಿಂತಿರುಗು ವರು. ಆದ್ದರಿಂದ ನೀನು ಈಗ ಯಾವ ಬಗೆಯ ಸಾಹಸಕ್ಕೂ ಮನಸ್ಸು ಮಾಡಬೇಡ" ಎಂದು ನುಡಿದರು. ರಾಜದಂಪತಿಗಳ ಆಶಾದೀವಿಗೆಗೆ ಎಣ್ಣೆಯನ್ನು ತುಂಬಿದಂತಾಯಿತು. ಅಂದಿನಿಂದ ಅವರೀರ್ವರಿಗೂ ಒಂದೊಂದು ದಿನವೂ ಯುಗದಂತೆ ಕಾಣುತ್ತಿತ್ತು.

ಹದಿನಾರು ವರುಷಗಳು ಹಾಗೂ ಹೀಗೂ ಕಳೆದುವು. ಕುಮಾರರ ವೃತ್ತಾಂತವೇನೊಂದೂ ತಿಳಿಯ ಬರಲಿಲ್ಲ. ರಾಜಹಂಸನು ವ್ಯಾಕುಲ ಚಿತ್ತನಾಗಿ ಮತ್ತೆ ಮುನಿವರರ ಬಳಿಗೆ ಬಂದನು. ಭಕ್ತಿಯಿಂದ ನಮಸ್ಕರಿಸಿ "ಸ್ವಾಮಿ, ತಾವು ಸೂಚಿಸಿದ್ದ ಅವಧಿಯು ತೀರುತ್ತ ಬಂತು. ಆದರೂ ಕುಮಾರರ ಸುಳಿವೇ ಇಲ್ಲ. ಅವರು ಯಾವಾಗ ಬರುವರೆಂಬುದನ್ನು ದಯೆ ಮಾಡಿ ತಿಳಿಸಬೇಕು" ಎಂದು ವಿನಯದಿಂದ ಬಿನ್ನೈಸಿದನು.

ಋಷಿವರರು ಸ್ವಲ್ಪಹೊತ್ತು ಕಣ್ಣುಮುಚ್ಚಿ ಧ್ಯಾನಮಾಡಿ ಕುಮಾರರ ವಿಷಯವನ್ನರಿತು ಹೇಳತೊಡಗಿದರು – "ರಾಜವಾಹನನೇ ಮೊದಲಾದ ಎಲ್ಲ ಕುಮಾರರೂ ದುರ್ಜಯರಾದ ಶತ್ರುಗಳನ್ನು ಜಯಿಸಿ ಭೂಮಂಡಲ ವನ್ನೇ ತಮ್ಮದಾಗಿ ಮಾಡಿಕೊಂಡು ಈಗ ಚಂಪಾನಗರದಲ್ಲಿ ಒಕ್ಕಡೆ ಸೇರಿದ್ದಾರೆ. ನೀನೀಗಲೇ ಅವರನ್ನು ಬರಮಾಡಲು ದೂತರ ಮೂಲಕ

ಹೇಳಿಕಳುಹಿಸು". ಇವನ್ನು ಕೇಳಿದ ರಾಜನ ಸಂತಸಕ್ಕೆ ಮೇರೆಯುಂಟೇ ? ಕೂಡಲೆ ಅವನು ಸುಖದುಃಖಗಳಲ್ಲಿ ಸಮಭಾಗಿನಿಯಾದ ರಾಣಿಯ ಬಳಿಗೆ ಬಂದು ವಿಷಯವನ್ನು ತಿಳಿಸಿ ಪತ್ರದೊಂದಿಗೆ ಚಾರರನ್ನು ಚಂಪಾಪಟ್ಟಣಕ್ಕಟ್ಟಿದನು.

ಇತ್ತ ಚಂಪಾನಗರದಲ್ಲಿ ಚಂಡಪೋತವನ್ನೇರಿ ಹೊರಟ ರಾಜವಾಹನನು ಹಿಂದೆ ಕುಳಿತಿದ್ದ ಅಪಹಾರ ವರ್ಮನ ಸೂಚನೆಯಂತೆ ಅರಮನೆಯ ಮುಂಭಾಗದ ದಾರಿಯಿಂದ ಹೊರಟು ನಗರದ ಹೊರವಲಯದಲ್ಲಿ ಗಂಗಾನದಿಯ ತೀರಕ್ಕೆ ಬಂದನು. ರಮ್ಯವಾದ ಆ ಸುರನದೀ ತೀರ ಪ್ರದೇಶವು ರಾಜಪುತ್ರನ ಮನಸ್ಸನ್ನು ಸೆಳೆಯಿತು. ಬೆಳ್ಳಗಿರುವ ಸಣ್ಣ ಮಳಲಿನಿಂದ ತುಂಬಿದ್ದ ಆ ತೀರವು ಗಂಗೆಯ ನೀರಹನಿಗಳನ್ನು ಹೊತ್ತು ತರುತ್ತಿದ್ದ ಮಂದ ಮಾರುತದಿಂದ ಯಾರನ್ನಾದರೂ ಅಲ್ಲಿ ಸ್ವಲ್ಪಹೊತ್ತು ಕುಳಿತು ವಿಶ್ರಮಿಸಿಕೊಳ್ಳುವಂತ ಪ್ರೇರಿಸುತ್ತಿತ್ತು. ಅದೂ ಪ್ರಾತಃಕಾಲ. ಆಗತಾನೆ ಉದಯಿಸುತ್ತಿದ್ದ ಬಾಲಸೂರ್ಯನ ನಮಶೀತೋಷ್ಣಕಿರಣಗಳು ಅಲ್ಲಲ್ಲಿ ತೀರದ ಗಿಡಗಳ ಸಂದುಗಳಿಂದ ಇಣಿಕಿ ನೋಡುತ್ತಿದ್ದುವು. ಆ ತೀರ ಪ್ರದೇಶದ ಗಿಡಗಳಿಗೆಲ್ಲ ರಾಜನೋ ಎಂಬಂತೆ ಮುಗಿಲುಮುಟ್ಟುವಂತೆ ಬೆಳೆದಿದ್ದ ಒಂದು ಆಲದಮರವು ಅಲ್ಲಿ ನಿಂತಿದ್ದಿತು. ಅದರ ಕೊಂಬೆಗಳು ಎಣ್ದೆಸೆಗಳಿಗೂ ಹಬ್ಬಿ ದಿಕ್ಕುಗಳ ಅಂತರವನ್ನು ಅಳೆಯುವಂತಿದ್ದುವು. ಅಲ್ಲಲ್ಲಿ ಕೊಂಬೆಗಳಿಗೆ ಊರೆಗೋಲಾಗಿದ್ದ ಬಿಳಲುಗಳು ಆ ಆಸ್ಥಾನ ಮಂಟಪದ ಕಂಬಗಳಂತೆ ಕಂಗೊಳಿಸುತ್ತಿದ್ದುವು. ರಾಜವಾಹನನು ಆ ಪ್ರದೇಶವನ್ನು ಮುಗ್ಧನಾಗಿ ನೋಡಿದನು. "ಬುದ್ಧದೇವನೂ ದಕ್ಷಿಣಾಮೂರ್ತಿಯೂ ಈ ಮರದ ಬುಡವನ್ನಲ್ಲವೇ ಆಶ್ರಯಿಸಿ ತಮ್ಮ ಜ್ಞಾನಬಂಡಾರವನ್ನು ಜನಗಳಿಗೆ ಹಂಚಿದರು" ಎನ್ನುತ್ತ ಗೆಳೆಯನಕಡೆನೋಡಿ ರಾಜಪುತ್ರನು ಇಲ್ಲಿಯೇ ಸ್ವಲ್ಪಹೊತ್ತು ಕುಳಿತುಕೊಳ್ಳೋಣವೆಂದನು. ಅದರಂತೆ ಅಪಹಾರವರ್ಮನು ಮೊದಲು ತಾನು ಆನೆಯಿಂದ ಇಳಿದು ಹಸ್ತಲಾಘವಕೊಟ್ಟು ಕುಮಾರನನ್ನು ಇಳಿಸಿದನು. ಆ ಮರದ ಬುಡದಲ್ಲಿ ಕೈಯಿಂದ ಮಳಲನ್ನು ಸಮಮಾಡಿದನು. ಅಲ್ಲಿ ರಾಜಪುತ್ರನು ಕುಳಿತನು. ಒಡನೆ ಬಂದಿದ್ದವರು ಅವನ ಸುತ್ತ ಕುಳಿತರು.

ಅಪಹಾರವರ್ಮನು ಹೇಳಿದ್ದಂತೆ ಧನಮಿತ್ರನು ಸಿಂಹವರ್ಮನನ್ನು ಸೆರೆಯಿಂದ ಬಿಡಿಸಿ ಆ ರಮಣೀಯವಾದ ತಾಣದಲ್ಲಿ ಕುಳಿತಿದ್ದ ಅರಗುವರನ ಬಳಿಗೆ ಕರೆತಂದನು. ಮಿತ್ರನಾದ ರಾಜಪುತ್ರನನ್ನು ಅರಸುತ್ತ ಹೊರಟ ಉಪಹಾರವರ್ಮ, ಅರ್ಥಪಾಲ, ಪ್ರಮತಿ, ಮಿತ್ರಗುಪ್ತ, ಮಂತ್ರಗುಪ್ತ ಮತ್ತು ವಿಶ್ರುತರೆಂಬ ಗೆಳೆಯರು ತಂತಮ್ಮ ಪರಾಕ್ರಮದಿಂದ ರಾಜ್ಯಗಳನ್ನು ಸಂಪಾದಿಸಿದ್ದರು. ಅವರೂ ದೊಡ್ಡ ದೊಡ್ಡ ಸೈನ್ಯಗಳೊಡನೆ ಸಿಂಹವರ್ಮನ ಸಹಾಯಕ್ಕೆಂದು ಚಂಪಾನಗರಕ್ಕೆ ಬಂದಿದ್ದರು. ದೈವಿಕವಾಗಿ ರಾಜವಾಹನನೂ ಅಲ್ಲಿಗೆ ಬಂದಿದ್ದುದನ್ನು ಅವರು ತಿಳಿದು ಸಂತೋಷದಿಂದ ಅವನ ದರ್ಶನಾ ಕಾಂಕ್ಷಿಗಳಾಗಿ ನದೀತೀರಕ್ಕೆ ಬಂದರು. “ಏನಿದು! ಎಲ್ಲ ಸ್ನೇಹಿತರೂ ಒಟ್ಟಿಗೇ ಬಂದಿರುವರು. ಇದೆಂತಹ ಅಭ್ಯುದಯ!” ಎಂದು ಹೊಂಪುಳಿ ಹೋಗಿ ರಾಜವಾಹನನು ಸ್ನೇಹಿತರನ್ನೆಲ್ಲ ಉಚಿತವಾದ ಮಾತುಗಳಿಂದ ಸತ್ಕರಿಸಿ ಆಲಿಂಗಿಸಿದನು. ಪರಸ್ಪರ ಕುಶಲಪ್ರಶ್ನೆಗಳು ನಡೆದುವು. ತಮ್ಮ ತಮ್ಮ ಪ್ರವಾಸಕಾಲದಲ್ಲಿ ನಡೆದ ಸಂಗತಿಗಳನ್ನು ಒಬ್ಬೊಬ್ಬರೂ ಬಿನ್ನವಿ ಸಿದರು. ಹೀಗೆ ಬಹುಕಾಲದ ಮೇಲೆ ಮತ್ತೆ ಒಂದುಗೂಡಿದ ಗೆಳೆಯ ಗುಂಪು ಸಂತೋಷದ ಕಡಲಲ್ಲಿ ಮುಳುಗಿದ್ದಿತು.

ಆ ವೇಳೆಗೆ ಸರಿಯಾಗಿ ರಾಜಹಂಸನು ಕಳುಹಿಸಿದ್ದ ದೂತರು ಅಲ್ಲಿಗೆ ಬಂದರು. ಚಿರಪರಿಚಿತರಾದ ಅವರನ್ನು ಗುರುತಿಸಿ ರಾಜವಾಹನನು ತಂದೆಯ ಅನಾಮಯವನ್ನು ಕೇಳಿ ತಿಳಿದನು. ಸೇವಕರು ವಿನಯದಿಂದ ರಾಜಹಂಸನ ಆಜ್ಞಾಪತ್ರವನ್ನು ಒಪ್ಪಿಸಿದರು. ರಾಜವಾಹನನು ಎದ್ದು ಆ ಪತ್ರವನ್ನು ತೆಗೆದುಕೊಂಡು ಮತ್ತೆ ಮತ್ತೆ ತಲೆಯ ಮೇಲಿಟ್ಟುಕೊಂಡು ಅದನ್ನು ಬಿಚ್ಚಿ ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಓದಿದನು.

“ಕ್ಷೇಮ. ಪುಷ್ಪಪುರದಿಂದ ರಾಜಹಂಸನು ಚಂಪಾನಗರದಲ್ಲಿ ವಾಸವಾಗಿರುವ ರಾಜವಾಹನ ಮೊದಲಾದ ಕುಮಾರರಿಗೆ ಆಶೀರ್ವಾದ ಪೂರ್ವಕ ಅಪ್ಪಣೆ ಮಾಡುವುದೇನೆಂದರೆ—ಇಲ್ಲಿಂದ ನನ್ನ ಅಪ್ಪಣೆಯನ್ನು ಪಡೆದು ಹೊರಟುಹೋದ ನೀವು ವನಪ್ರದೇಶದಲ್ಲಿ ಶಿವಾಲಯದ ಬಳಿ ಸೈನ್ಯ ವನ್ನು ಬೀಡುಬಿಟ್ಟಿದ್ದಿರಿ. ರಾತ್ರಿ ಎಲ್ಲಿಗೋ ಹೊರಟುಹೋದ ರಾಜವಾಹನನು ಬೆಳಗ್ಗೆ ಕಾಣಿಸಲಿಲ್ಲ. ಅವನನ್ನು ಹುಡುಕಿಕೊಂಡು ಮಿಕ್ಕ ಕುಮಾರರು

ಹೊರಟುಹೋದದ್ದರಿಂದ ಸೈನಿಕರು ಹಿಂತಿರುಗಿ ಬಂದು ಈ ವಿಷಯವನ್ನು ನಮಗೆ ತಿಳಿಸಿದರು. ವ್ಯಾಕುಲ ಚಿತ್ತರಾದ ನಾವು ವಾಮದೇವ ಮಹರ್ಷಿಗಳ ಆಶ್ವಾಸನದಂತೆ ಹದಿನಾರು ವರ್ಷಗಳನ್ನು ಅತಿ ಪ್ರಯಾಸದಿಂದ ಕಳೆದೆವು. ಈಗ ನೀವೆಲ್ಲರೂ ಚಂಪಾನಗರದಲ್ಲಿ ಒಟ್ಟು ಸೇರಿರುವುದನ್ನೂ ಮಹರ್ಷಿಗಳಿಂದಲೇ ತಿಳಿದು ನಿಮ್ಮನ್ನು ಬರಮಾಡಿಕೊಳ್ಳಲು ಈ ಪತ್ರವನ್ನು ಬರೆದಿದ್ದೇನೆ. ಇನ್ನು ಕ್ಷಣಕಾಲಕೂಡ ತಡಮಾಡದೆ – ನೀರಡಿಸಿದರೆ ನೀರನ್ನು ಕೂಡ ದಾರಿಯಲ್ಲಿ ಕುಡಿಯುಕೊಂಡು – ನೀವು ಬರತಕ್ಕದ್ದು. ಇಲ್ಲವಾದರೆ ನನ್ನನ್ನೂ ನಿಮ್ಮ ತಾಯಿ ವಸುಮತಿಯನ್ನೂ ನಾಮಾವಶೇಷವಾಗಿರುವರನ್ನಾಗಿ ಕೇಳುವಿರಿ.''

ಪತ್ರವನ್ನು ಓದಿ ರಾಜವಾಹನನು ಎಲ್ಲ ಗೆಳೆಯರ ಮುಖವನ್ನೂ ನೋಡಿದನು. "ಮಹಾರಾಜರ ಅಪ್ಪಣೆಯಂತೆ ನಡೆಯುವುದರಲ್ಲಿ ತೊಂದರೆಯೇನಿದೆ? ಉಜ್ಜಯಿನಿಯನ್ನು ನಾವು ಚಂಪಾಪಟ್ಟಣದಲ್ಲೇ ಗೆದ್ದಿದ್ದೇವೆ. ಉಜ್ಜಯಿನಿಯನ್ನು ನಮ್ಮ ಅಧೀನಕ್ಕೆ ತೆಗೆದುಕೊಂಡು ಹೊರಟರೆ ನಮ್ಮ ದಿಗ್ವಿಜಯವು ಪೂರ್ತಿಯಾದಂತೆಯೇ ಸರಿ." ಎಂದೆಲ್ಲ ಗೆಳೆಯರೂ ಏಕಕಂಠದಿಂದ ವಿಜ್ಞಾಪಿಸಿದರು. ಅವರವರು ಬಂದಿದ್ದ ಸೈನ್ಯಗಳ ಬಹುಭಾಗಗಳನ್ನು ತಮ್ಮ ತಮ್ಮ ಮಂತ್ರಿಗಳೊಂದಿಗೆ ರಾಜಧಾನಿಗೆ ಹಿಂತಿರುಗಿಸಿದರು. ಉಚಿತ ಪರಿವಾರದೊಂದಿಗೆ ತಮ್ಮ ತಮ್ಮ ಹೆಂಡತಿಯರೊಡನೆ ಎಲ್ಲರೂ ಪುಷ್ಪಪುರಿಯ ಮಾರ್ಗವಾಗಿ ಹೊರಟರು. ಚಂಪೆಯರಸು ಸಿಂಹವರ್ಮನೂ ಅವರನ್ನು ಅನುಸರಿಸಿದನು.

ನೇರವಾಗಿ ಪುಷ್ಪಪುರಿಗೆ ಹೋಗುವ ಮಾರ್ಗವನ್ನು ಬಿಟ್ಟು ಉಜ್ಜಯಿನಿಯ ಮೇಲೆ ಪುಷ್ಪಪುರಿಯ ಮಾರ್ಗವನ್ನು ಹಿಡಿದುಹೊರಟರು. ತಾವು ಹೊರಟಿರುವ ಸಮಾಚಾರವನ್ನು ಜಾಗ್ರತೆ ಮಹಾರಾಜನಿಗೆ ತಿಳಿಸುವಂತೆ ಬಂದಿದ್ದ ದೂತರನ್ನು ಮೊದಲೇ ಕಳುಹಿಸಿಕೊಟ್ಟರು. ಹಲವು ಪ್ರಯಾಣಗಳಲ್ಲಿ ಉಜ್ಜಯಿನಿಯನ್ನು ಬಂದು ಸೇರಿದರು.

ದುಷ್ಟ ಮಂತ್ರಿಯು ಹತನಾದುದಕ್ಕೆ ಸಂತೋಷಪಟ್ಟರೂ ಮಾನಧನನಾದ ಮಾನಸಾರನು ತನ್ನ ಸೈನ್ಯದ ಸೋಲನ್ನು ಕೇಳಿ ಕುದಿಯುತ್ತಿದ್ದನು. ಅಳಿಯನಾದ ರಾಜವಾಹನನು ಗೆಳೆಯರ ಸೈನ್ಯದೊಡನೆ ರಾಜಧಾನಿಯನ್ನು

ಮುತ್ತಿರುವುದನ್ನು ಕೇಳಿ ಮಾನ್ಸಾರ ಮರುಗಿದನು. ಪರಾಕ್ರಮಿಗಳು ಪ್ರಾಣ ಗಳನ್ನಾದರೂ ಬಲಿಗೊಟ್ಟು ಮಾನವನ್ನು ಉಳಿಸಿಕೊಳ್ಳುವರಲ್ಲವೇ ? ಮುದುಕ ನಾದರೂ ಮಾನಸಾರನು ರಾಜಧಾನಿಯಲ್ಲಿದ್ದ ಸೈನ್ಯದೊಂದಿಗೆ ಶತ್ರುಗಳನ್ನು ಎದುರಿಸಿದನು. ಈಶ್ವರನು ಅನುಗ್ರಹಿಸಿದ್ದ ಗದೆಯನ್ನು ಅವನು ಎತ್ತಲಾರದೆ ಹೋದನು. ಆದ್ದರಿಂದ ಸಾಮಾನ್ಯ ಆಯುಧಗಳಿಂದಲೇ ಯುದ್ಧಮಾಡಿದನು. ಶೂರನಾದ ಅವನು ಶೂರರಿಗೆ ತಕ್ಕಂತೆ ರಣರಂಗದಲ್ಲಿ ಮಡಿದು ವೀರಸ್ವರ್ಗ ವನ್ನು ಸೇರಿದನು. ಮಾಲವ ರಾಜಧಾನಿಯು ಮಗಧರಾಜಕುಮಾರನ ವಶವಾಯಿತು.

ಮಾಲವ ರಾಜ್ಯವನ್ನೇ ಸ್ವಾಧೀನವಡಿಸಿಕೊಂಡ ಕುಮಾರರು ಆ ದೊಡ್ಡ ರಾಜ್ಯವನ್ನು ರಕ್ಷಿಸುವ ವ್ಯವಸ್ಥೆಗೆ ಮನಗೊಟ್ಟರು. ಸ್ವಾಮಿನಿಷ್ಠರೂ ರಾಜ ನೀತಿ ಕುಶಲರೂ ಆದ ಮಂತ್ರಿಗಳನ್ನು ಕರಸಿ ಉಚಿತ ಸೈನ್ಯದೊಂದಿಗೆ ರಾಜ್ಯವನ್ನು ನೋಡಿಕೊಳ್ಳುವಂತೆ ನಿಯಮಿಸಿದರು. ಅವಂತಿಸುಂದರಿ ಯೊಡನೆ ಮತ್ತೆ ಸೇರಿದ ರಾಜಪುತ್ರನು ಹಿಂದಿನ ಕಷ್ಟಗಳನ್ನೆಲ್ಲ ಒಮ್ಮೆಯೇ ಮರೆತನು. ಆಕೆಯಿಂದ ಕೂಡಿಕೊಂಡು ಗೆಳೆಯ ಸಹಿತನಾಗಿ ಅವನು ಪುಷ್ಪ ಪುರಕ್ಕೆ ಬಂದನು.

ಈ ಶುಭವಾರ್ತೆಯನ್ನು ಕೇಳಿ ಸಂತೋಷದಿಂದ ಉಬ್ಬಿಹೋದ ರಾಜನು ಅಲಂಕೃತವಾದ ನಗರದ ಹೊರವಲಯದಲ್ಲಿ ಕುಮಾರರನ್ನು ಎದುರು ಗೊಂಡನು. ಆಗಮನವನ್ನೇ ನಿರೀಕ್ಷಿಸುತ್ತಿದ್ದ ರಾಜಹಂಸ ಮತ್ತು ವಸು ಮತಿಯರ ಪಾದಗಳಿಗೆ ರಾಜವಾಹನ ಮೊದಲುಗೊಂಡು ಒಬ್ಬೊಬ್ಬರೂ ನಮಸ್ಕರಿಸಿದರು. ಪರಸ್ಪರ ಆಲಿಂಗನ ಕುಶಲಪ್ರಶ್ನೆಗಳು ನಡೆದುವು. ರಾಜನು ಶುಭಮುಹೂರ್ತದಲ್ಲಿ ಎಲ್ಲ ಕುಮಾರರನ್ನೂ ಪುರಪ್ರವೇಶ ಮಾಡಿಸಿ ದನು. ಮಹಾರಾಜನು ಮೊದಲೇ ದೂತರನ್ನಟ್ಟಿ ಆಗಮನದಿಂದ ಉತ್ಸವ ವನ್ನು ಮಹೋತ್ಸವವಾಗಿಸಬೇಕೆಂದು ವಾಮದೇವ ಮಹರ್ಷಿಗಳನ್ನು ಪ್ರಾರ್ಥಿಸಿದ್ದನು. ಪ್ರಾರ್ಥನೆಯನ್ನು ಅಂಗೀಕರಿಸಿ ಮಹರ್ಷಿಗಳು ದಯ ಮಾಡಿಸಿದ್ದರು. ಎಲ್ಲರೂ ಮುನಿವರರ ಚರಣಗಳಿಗೆ ಭಕ್ತಿಯಿಂದ ಪೊಡ ಮಟ್ಟರು. ಮಹರ್ಷಿಗಳು ವಿನೀತರಾದ ಕುಮಾರರನ್ನು ಮನವಾರೆ ಆಶೀ ರ್ವದಿಸಿದರು. ಅನಂತರ ಅವರ ದಿಗ್ವಿಜಯದ ಅದ್ಭುತ ಸಂಗತಿಗಳನ್ನು

ತಿಳಿದು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಆಗ ಎಲ್ಲ ಕುಮಾರರನ್ನೂ ಕುರಿತು "ನೀವು ನೀವು ನಿಮ್ಮ ನಿಮ್ಮ ರಾಜ್ಯಗಳನ್ನು ಧರ್ಮದಿಂದ ಪಾಲಿಸುತ್ತಾ ಸುಖವಾಗಿದ್ದುಕೊಂಡು ಇಷ್ಟಬಂದಾಗ ಇಲ್ಲಿಗೆ ಬಂದು ರಾಜಹಂಸ ವಸುಮತಿಯರ ಸಂತೋಷಕ್ಕೆ ಕಾರಣರಾಗಿರಿ." ಎಂದು ಋಷಿವರರು ಹಿತ ವಚನವನ್ನು ನುಡಿದರು.

ಈ ಕಲ್ಯಾಣ ಪರಂಪರೆಯನ್ನು ಕಂಡು ಆನಂದದಲ್ಲಿ ಮುಳುಗಿಹೋದ ರಾಜನು ಮುನಿಶ್ರೇಷ್ಠನಿಗೆ ನಮಸ್ಕಾರಮಾಡಿ "ಇದೆಲ್ಲ ತಮ್ಮ ತಪಃ ಪ್ರಭಾವದ ಫಲ. ತಮ್ಮ ಆಶೀರ್ವಾದ ಬಲದಿಂದ ಮಾನುಷದುರ್ಲಭವಾದ ಸುಖಲಾಭವು ನನಗಾಯಿತು. ಇನ್ನು ಮುಂದೆ ರಾಜವಾಹನನೇ ಮಗಧ ಮಾಲವರಾಜ್ಯಗಳ ಚಕ್ರವರ್ತಿಯಾಗಿ ಧರ್ಮದಿಂದ ರಾಜ್ಯವನ್ನು ಪರಿಪಾಲಿಸಲಿ. ಗೆಳೆಯ ಕುಮಾರರೂ ಅವನ ಸಹಾಯಕ ರಾಜರಾಗಿರಲಿ. ನಾನು ವಂಶಪರಂಪರೆಗೆ ತಕ್ಕಂತೆ ಸತೀ ದ್ವಿತೀಯನಾಗಿ ತಮ್ಮ ಆಶ್ರಮದಲ್ಲಿಯೇ ಇದ್ದುಕೊಂಡು ವಾನಪ್ರಸ್ಥಾಶ್ರಮ ಧರ್ಮವನ್ನನುಸರಿಸಿ ಕೈವಲ್ಯವನ್ನು ಹೊಂದುವಂತೆ ಅನುಗ್ರಹಿಸಬೇಕು." ಎಂದು ಪ್ರಾರ್ಥಿಸಿದನು.

ಅದಕ್ಕೆ ಆ ಹಿರಿಯತಪಸಿಯು ಮಂದಹಾಸವನ್ನು ಸೂಸುತ್ತ 'ತಥಾಸ್ತು' ಎಂದನು.

# ಪುಷ್ಪೋದ್ಭವ

## ೧

ಪುಷ್ಪಪುರಿ ಎಂಬುದು ಮಗಧರಾಜ್ಯದ ರಾಜಧಾನಿ. ಅಂಗಡಿ ಬೀದಿ ಯಲ್ಲಿದ್ದ ಅನೇಕ ಅಂಗಡಿಗಳಲ್ಲಿ ರಾಶಿರಾಶಿಯಾಗಿ ಹಾಕಿರುವ ರತ್ನರಾಶಿ ಗಳಿಂದ ದೇಶದ ಸಂಪತ್ತನ್ನು ಸೂಚಿಸುತ್ತಿದ್ದ ಆ ನಗರವು ಎಲ್ಲ ಪಟ್ಟಣ ಗಳಿಗೂ ಒರೆಗಲ್ಲಿನಂತಿದ್ದಿತು. ಮಗಧದೇಶದ ದೊರೆಯಾದ ರಾಜಹಂಸನು ರಾಣಿಯಾದ ವಸುಮತಿಯೊಡನೆ ಹಲವು ಕಾಲದಿಂದ ರಾಜ್ಯಭಾರ ಮಾಡುತ್ತ ಪ್ರಜೆಗಳ ಅನುರಾಗಕ್ಕೆ ಪಾತ್ರನಾಗಿದ್ದನು. ಅವನಿಗೆ ಮೂವರು ಮಂತ್ರಿ ಗಳಿದ್ದರು. ಅವರಲ್ಲಿ ಪದ್ಮೋದ್ಭವನೆಂಬುವನಿಗೆ ರತ್ನೋದ್ಭವನೆಂಬ ಮಗನು ಹುಟ್ಟಿದನು. ವಂಶಪರಂಪರೆಯಿಂದ ಅವರು ರತ್ನವ್ಯಾಪಾರಿಗಳು. ಆದ್ದರಿಂದ ತಂದೆಯು ಮಗನನ್ನು ಚಿಕ್ಕಂದಿನಿಂದ ರತ್ನವ್ಯಾಪಾರದಲ್ಲಿ ನಿಪುಣನಾಗುವಂತೆ ಮಾಡಿದನು. ಬರಬರುತ್ತ ರತ್ನೋದ್ಭವನು ವ್ಯಾಪಾರದಲ್ಲಿ ಕುಶಲನಾಗಿ ಹೆಚ್ಚು ಹೆಚ್ಚು ಹಣಸಂಪಾದಿಸಿದನು. ಪ್ರಾಪ್ತವಯಸ್ಕನಾದ ಅವನು ಮತ್ತಷ್ಟು ಹಣಸಂಪಾದಿಸಬೇಕೆಂಬ ಆಶೆಯಿಂದ ದ್ವೀಪದಿಂದ ದ್ವೀಪಕ್ಕೆ ಪ್ರಯಾಣ ಮಾಡತೊಡಗಿದನು. ಹೀಗೆ ದ್ವೀಪಗಳಿಗೆ ಹೋಗುತ್ತ ಒಂದು ಸಲ ಕಾಲಯವನ ದ್ವೀಪಕ್ಕೆ ಬಂದನು.

ಸಮುದ್ರ ಮಧ್ಯದಲ್ಲಿದ್ದ ಆ ದ್ವೀಪವನ್ನು ಸೇರಬೇಕಾದರೆ ಹಡಗಿನಲ್ಲಿ ತಿಂಗಳು ಗಟ್ಟಲೆ ಪ್ರಯಾಣಮಾಡಬೇಕಾಗುತ್ತಿದ್ದಿತು. ಅದೂ ಅಲ್ಲದೆ ಸಮುದ್ರವು ಆಗಾಗ ಬಿರುಗಾಳಿಯಿಂದ ಭಯಂಕರವಾಗುತ್ತಿದ್ದುದರಿಂದ ನಾವೆ ಯಿಂದ ಸಮುದ್ರವನ್ನು ದಾಟುವುದು ಅಷ್ಟೇನೂ ಸುಲಭವಾಗಿರುತ್ತಿರಲಿಲ್ಲ. ಒಂದು ಸಲ ಆ ದ್ವೀಪಕ್ಕೆ ಹೋಗಿ ಬಂದವರು ಮೃತ್ಯುವಿನ ದಾಡೆಯಿಂದ ಪಾರಾದಂತೆ ಭಾವಿಸುತ್ತಿದ್ದರು. ಇಷ್ಟೊಂದು ಕಷ್ಟತರವಾಗಿದ್ದರೂ ಹಣದಾಶೆ ಯಿಂದ ಅನೇಕ ವ್ಯಾಪಾರಿಗಳು ಆ ಸಂಪತ್ಸಮೃದ್ಧ ದ್ವೀಪಕ್ಕೆ ಹೋಗಲು

ಹಿಂತೆಗೆಯುತ್ತಿರಲಿಲ್ಲ. ಅದೂ ಅಲ್ಲದೆ ಹೋದವರು ಅನುಕೂಲ ದೊರೆತರೆ ಅಲ್ಲಿಯೇ ಮನೆಗಳನ್ನು ಮಾಡಿಕೊಂಡು ನೆಲನೆ ನಿಲ್ಲುತ್ತಿದ್ದರು.

ರತ್ನೋದ್ಭವನೂ ವ್ಯಾಪಾರಕ್ಕೆಂದು ಅಲ್ಲಿಗೆ ಬಂದವನು ಕಾಲಗುಪ್ತ ನೆಂಬ ದೊಡ್ಡ ವ್ಯಾಪಾರಿಯ ಮನೆಯನ್ನು ಸೇರಿದನು. ಕಾಲ ಗುಪ್ತನಿಗೆ. ಸುವೃತ್ತಳೆಂಬ ಸುಂದರಿಯಾದ ಮಗಳೊಬ್ಬಳಿದ್ದಳು. ಆ ವೈಶ್ಯವರನು ಮಗಳಿಗೆ ಅನುರೂಪನಾದ ವರನನ್ನು ಹುಡುಕುತ್ತಿದ್ದನು. ತನ್ನ ಮನೆಗೆ ಬಂದ ರತ್ನೋದ್ಭವನನ್ನು ನೋಡಿ ಅವನಿಗೆ ಮಹಾನಂದವಾಯಿತು. ವಿಧಿಯು ಅಭಿಮುಖನಾದರೆ ಬೇರೆ ದ್ವೀಪದಿಂದಾಗಲೀ, ದ್ವೀಪದ ಮಧ್ಯದಿಂದಾಗಲೀ, ಸಮುದ್ರದ ಕೊನೆಯಿಂದಾಗಲೀ, ದಿಗಂತದಿಂದಾಗಲೀ ವರನನ್ನು ಬರ ಮಾಡುವನಲ್ಲವೇ!

ತರುಣನೂ ಸುಂದರನೂ ಆದ ರತ್ನೋದ್ಭವನಿಗೆ ತನ್ನ ಮಗಳನ್ನು ಕೊಟ್ಟು ಶುಭಮುಹೂರ್ತದಲ್ಲಿ ಕಾಲಗುಪ್ತನು ವಿವಾಹವನ್ನು ನೆರವೇರಿಸಿದನು. ನವವಧುವಿನೊಂದಿಗೆ ಆ ತರುಣವ್ಯಾಪಾರಿಯು ಸುಖಗಳನ್ನು ಅನುಭವಿಸುತ್ತ ಅಲ್ಲಿಯೇ ಇದ್ದುಬಿಟ್ಟನು.

ರತ್ನೋದ್ಭವನು ಊರನ್ನು ಬಿಟ್ಟು ಬಹಳ ವರ್ಷಗಳಾದುವು. ಅವನ ಮನಸ್ಸು ಪುಷ್ಪಪುರದ ಕಡೆಗೆ ಸಾಗಿತ್ತು. ಸಹೋದರ ಸ್ನೇಹವು ಅವನನ್ನು ದ್ವೀಪದಲ್ಲಿ ಒಂದೆಡೆ ನಿಲ್ಲಗೊಡಲಿಲ್ಲ. ಕಾಲಗುಪ್ತನು ಅಳಿಯನು ಎಲ್ಲಿ ಊರಿಗೆ ಹೋಗಬೇಕೆನ್ನುವನೋ ಎಂದು ಅವನಿಗೆ ಯಾವ ಕೊರತೆಯೂ ಕಂಡು ಬರದಂತೆ ಬೇಕುಬೇಕಾದ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟಿದ್ದನು. ಸುಂದರಿಯಾದ ಮನೋನುಕೂಲೆಯಾದ ಸತಿ; ಸರ್ವಸಂಪತ್ಸಮೃದ್ಧವಾದ ಭುವನದಂತಿರುವ ಭವನ; ಆರೋಗ್ಯದಿಂದ ದೃಢವಾದ ಯವ್ವನದಿಂದ ತುಂಬಿದ ದೇಹ– ಇವೆಲ್ಲವೂ ಇದ್ದರೂ ಒಡಹುಟ್ಟಿದವರನ್ನು ಕಾಣಬೇಕೆಂಬ ಕುತೂಹಲವು ಅವನ ಚಿತ್ತವನ್ನು ಶಾಂತಿಯಿಂದ ದೂರಮಾಡಿತ್ತು. ಕೊನೆ ಗೊಂದು ದಿನ ಅವನು ತುಂಬುಬಸಿರಿಯಾದ ಸತಿಯನ್ನು ಕರೆದುಕೊಂಡು ಪುಷ್ಪಪುರಕ್ಕೆ ಹೋಗಲು ಸಿದ್ಧನಾದನು. ಮಾವನು ಎಷ್ಟು ಬಗೆಯಿಂದ ಹೇಳಿದರೂ ಅಳಿಯನ ಮನಸ್ಸು ದ್ವೀಪವಾಸವನ್ನು ಮುಂದುವರಿಸಲು

ಒಡಂಬಡಲಿಲ್ಲ. ಗರ್ಭಿಣಿಯು ಪ್ರಸವಿಸಿ ಪ್ರಯಾಣಕ್ಕೆ ಯೋಗ್ಯಳಾಗುವ ವರೆಗಾದರೂ ತಡೆಯಬಹುದಾಗಿತ್ತು. ವಿಧಿಯು ಸೆಳೆದುಕೊಂಡು ಹೋಗುತ್ತಿರುವಾಗ ವಿವೇಕ ವಿಮರ್ಶೆಗಳಿಗೆ ಅವಕಾಶವೆಲ್ಲಿ ?

ಹಡಗು ಸಮುದ್ರದ ನಡುವೆ ತೇಲಿಕೊಂಡು ಮುಂದೆ ಸಾಗುತ್ತಿತ್ತು. ಎತ್ತ ನೋಡಿದರೂ ನೀರು. ಪ್ರಪಂಚವೇ ಜಲಮಯವಾಗಿರುವಂತೆ ಸುತ್ತಲೂ ನೀರಿನ ಹೊರತು ಮತ್ತೇನೂ ಕಣ್ಣಿಗೆ ಕಾಣುತ್ತಿರಲಿಲ್ಲ. ಹಡಗಿನಲ್ಲಿ ತುಂಬು ಬಸಿರಿಯು ಪತಿಯೊಡನೆ ಸಂತೋಷದಿಂದ ಅತ್ತೆಯ ಮನೆಗೆ ಹೋಗುವ ಸಂತಸದಲ್ಲಿದ್ದಳು. ಅಪರ ವಯಸ್ಸಿನ ದಾದಿಯೊಬ್ಬಳು ಅವಳ ಆಸರೆಯಾಗಿ ತವರು ಮನೆಯಿಂದ ಬಳುವಳಿಯಾಗಿ ಬಂದಿದ್ದಳು. ಸಮುದ್ರವು ಶಾಂತವಾಗಿದ್ದುದರಿಂದ ನಾವಿಕನೂ ಹರ್ಷಚಿತ್ತನಾಗಿದ್ದನು. ಎಂದೂ ಸಮುದ್ರಯಾನವು ಇಷ್ಟೊಂದು ನಿರಾತಂಕವಾಗಿ ನಡೆದಿರಲಿಲ್ಲವೆಂಬುದನ್ನು ಯೋಚಿಸುತ್ತಿದ್ದ ಅವನ ಮನಸ್ಸು ಮುಂಬರುವ ಆಪತ್ತನ್ನು ಶಂಕಿಸುತ್ತಿತ್ತು. ರತ್ನೋದ್ಭವನ ಸ್ವಾಂತದಲ್ಲಿ ಪುಷ್ಪಪುರಿಯ ದೃಶ್ಯಗಳು ಸಮುದ್ರದ ಅಲೆಗಳಂತೆ ಒಂದಾದ ಮೇಲೊಂದು ಮೂಡಿ ಮಾಯವಾಗುತ್ತಿದ್ದುವು. ಗರ್ಭದ ಭರದಿಂದ ಆಲಸಿಯಾದ ತರುಣಿಯ ಮುಖದಲ್ಲಿ ಆಗಾಗ ನೋವಿನ ಸೆಲೆಯು ಕಂಡುಬಂದು ಮಾಯ ವಾಗುತ್ತಿತ್ತು. ಸಮೀಪದಲ್ಲಿದ್ದ ದಾದಿಯು ಧೈರ್ಯ ಹೇಳುತ್ತ ಕುಳಿತಿದ್ದಳು. ವಿಪತ್ತು ಬರಬೇಕಾದರೆ ಹೇಳಿ ಕೇಳಿ ಬರುವುದೇ ?

ಹಡಗು ದಡಕ್ಕೆ ಸ್ವಲ್ಪ ದೂರದಲ್ಲಿ ಬರುತ್ತಿತ್ತು. ಯಾವ ತೊಂದರೆಯೂ ಇಲ್ಲದಿದ್ದಿದ್ದರೆ ಸ್ವಲ್ಪಕಾಲದಲ್ಲಿಯೇ ಅದು ಸುಖವಾಗಿ ದಡವನ್ನು ಮುಟ್ಟಬಹುದಾಗಿತ್ತು. ಸಣ್ಣ ಸಣ್ಣವಾಗಿ ಬರುತ್ತಿದ್ದ ಅಲೆಗಳು ಬೆಳೆಯತೊಡಗಿದುವು. ಗಾಳಿಯು ಬರಬರುತ್ತ ಚಂಡವಾಯಿತು. ಹಡಗು ಅಲೆಯನ್ನೇರಿ ಇಳಿಯುವಾಗ ಬೆಟ್ಟವನ್ನೇರಿ ಇಳಿದಂತೆ ಭಾಸವಾಗುತ್ತಿತ್ತು. ಕಡಲು ಇವರ ಸುಖಪ್ರಯಾಣವನ್ನು ಕಂಡು ಅಸೂಯೆಯಿಂದ ಕುದಿಯುತ್ತಿದೆಯೋ ಎಂಬಂತೆ ಭಯಂಕರವಾಗುತ್ತ ಬಂತು. ಬೆಟ್ಟಗಳನ್ನೇ ಅಲುಗಿಸುವಂಥ ಬಿರುಗಾಳಿಯೊಂದೆಡೆ; ಬೆಟ್ಟಗಳಂತೆ ಮುಗಿಲು ಮುಟ್ಟುವ ರಭಸದಿಂದ ಮೇಲೇಳುತ್ತಿದ್ದ ಅಲೆಗಳೊಂದೆಡೆ. ಇವುಗಳ ನಡುವೆ ಸಿಕ್ಕಿದ ಹಡಗು ನಾವಿಕನ ಕೈಮೀರಿತು. ಹಡಗಿನಲ್ಲಿದ್ದ ವ್ಯಕ್ತಿಗಳ ಭಯವು ಹೆಚ್ಚಿದಂತೆಲ್ಲಾ

ಅಲೆಗಳ ಸಾಲು ಹೆಚ್ಚುತ್ತಿತ್ತು. ವಿಶಾಲವಾದ ಆಕಾಶದಲ್ಲಿ ಮಿನುಗುವ ನಕ್ಷತ್ರದಂತೆಯಿದ್ದ ಹಡಗು ಒಮ್ಮೆಯೇ ಕಾಣದಾಯಿತು.

ಒಂದು ವಿಷಯದಲ್ಲಿ ವಿಧಿಯು ಕ್ರೂರವಾಗಿದ್ದರೂ ಮತ್ತೊಂದು ವಿಷಯ ದಲ್ಲಿ ಅದು ಸುಮುಖವಾಗಿರುವುದು. ಗರ್ಭಿಣಿಯಾದ ಸುವೃತ್ತೆಯನ್ನು ಬಾಚಿ ತಬ್ಬಿಕೊಂಡಿದ್ದ ದಾದಿಯು ದೈವಿಕವಾಗಿ ಬರುತ್ತಿದ್ದ ಹಲಗೆಯೊಂದನ್ನು ಹಿಡಿದಳು. ಸ್ವಲ್ಪ ಮಟ್ಟಿಗೆ ಶಾಂತವಾದಂತಿದ್ದ ಕಡಲಿನ ಅಲೆಗಳ ಸಹಾಯ ದಿಂದ ಆ ಹಲಗೆಯು ಇವರಿಬ್ಬರನ್ನೂ ಒಂದೆಡೆ ದಡಕ್ಕೆ ತಂದು ಬಿಟ್ಟಿತು. ಪತಿಯನ್ನಗಲಿದ ಸತಿಗೆ ದಾದಿಯ ಸಹಾಯವೂ ಹಲಗೆ ಸಿಕ್ಕಿದುದೂ ಅಪ ಕಾರವೆಂದೇ ಮನವರಿಕೆಯಾಯಿತು. ತಾನೂ ನೀರಿನಪಾಲಾಗಿದ್ದಿದ್ದರೆ ಈ ವಿರಹವನ್ನು ಅನುಭವಿಸಬೇಕಾದ್ದಿರಲಿಲ್ಲವೆಂದು ಅವಳು ಬಗೆದಳು. ಸಂಕುಚಿತ ಮನಸ್ಸಿನಿಂದ ಅವಳು ದಾದಿಯನ್ನು ಅನುಸರಿಸಿ ನಡೆಯುತ್ತಿದ್ದಳು.

ಅದೊಂದು ಹೆಗ್ಗಾಡು. ಎಲ್ಲೆಲ್ಲೂ ಕ್ರೂರ ಮೃಗಗಳ ಶಬ್ದ. ಜತೆಗೆ ಬಸಿರಿನ ನೋವು ಜೋರು. ಮೊದಲೇ ಶ್ರಾಂತಳಾಗಿದ್ದ ಸುವೃತ್ತೆಯು ನಡೆಯ ಲಾರದವಳಾದಳು. ವೇದನೆಯು ಹೆಚ್ಚಾಗಿ ಎಚ್ಚರ ತಪ್ಪಿದಳು. ಆಗ ತಾನೇ ಹುಟ್ಟಿದ ಸುಲಕ್ಷಣನಾದ ಮಗುವು ನಿಶ್ಚೇತನಳಾಗಿದ್ದ ತಾಯಿಯನ್ನಲ್ಲದಿದ್ದರೂ ಮುದಿ ದಾದಿಯನ್ನು ಸಂತೋಷಪಡಿಸಿದನು. ಜಾಗ್ರತೆಯಾಗಿ ಊರು ಸೇರುವುದೊಳ್ಳೆಯದೆಂದು ಬಗೆದ ದಾದಿಯು ಎಚ್ಚರವಿಲ್ಲದ ತಾಯಿಯ ಬಳಿ ಮಗುವನ್ನು ಬಿಡಲಾರದೆ ಎತ್ತಿಕೊಂಡು ಆ ಹೆಗ್ಗಾಡಿನಲ್ಲಿ ದಾರಿಯೊಂದನ್ನು ಹುಡುಕುತ್ತ ಬಂದಳು. ದೂರದಲ್ಲೊಬ್ಬ ಋಷಿಕುಮಾರನು ಬರುತ್ತಿದ್ದುದನ್ನು ಅವಳು ಕಂಡಳು. ಆಗ ಅವಳಿಗೆ ಸ್ವಲ್ಪ ಧೈರ್ಯ ಬಂತು. ಅವನನ್ನು ಕೇಳಿ ಮಾರ್ಗವನ್ನು ತಿಳಿಯೋಣವೆಂದು ಅಂದುಕೊಳ್ಳುತ್ತಿರುವಷ್ಟರಲ್ಲಿ ಮದಿಸಿದ ಆನೆಯೊಂದು ನುಗ್ಗಿ ಬಂದಿತು. ದಾರಿಯಲ್ಲಿದ್ದ ಗಿಡಗಳನ್ನೂ ಮರಗಳನ್ನೂ ಲೆಕ್ಕಿಸದೆ ಮುನ್ನುಗ್ಗುತ್ತಿದ್ದ ಅದನ್ನು ಕಂಡ ಕೂಡಲೆ ಹೆದರಿದ ದಾದಿಯು ಓಡಲಾರಂಭಿಸಿದಳು. ಭಯದಿಂದ ನಡುಗುತ್ತಿದ್ದ ಅವಳ ಕೈಗ ಳಿಂದ ಮಗು ಜಾರಿತು. ತನ್ನ ಪ್ರಾಣದಾಸೆಯಿಂದ ಮಗುವಿನಾಸೆಯನ್ನು ತೊರೆದು ಅವಳು ಓಡಿದಳು. ಋಷಿಕುಮಾರನು ದೂರದಿಂದ ಇದನ್ನು ಕಂಡು ಮುಂದೆ ಏನಾಗುವುದೋ ನೋಡೋಣವೆಂದು ಸಮೀಪದ ಬಳ್ಳಿಯ

ಪೊದೆಯನ್ನು ಹೊಕ್ಕು ಇಣಿಕಿ ನೋಡುತ್ತಿದ್ದನು. ಮದಗಜವು ಮುಂದೆ ಬರುತ್ತ ದಾರಿಯಲ್ಲಿ ಬಿದ್ದಿದ್ದ ಆ ಮಗುವನ್ನು ನೀಳವಾಗಿದ್ದ ತನ್ನ ಸೊಂಡಿಲಿನಿಂದ ಎತ್ತಿಕೊಂಡಿತು. ಅಯ್ಯೋ! ಮುದ್ದಾದ ಮಗುವು ಆನೆಗೆ ಸಿಕ್ಕಿ ಸಾಯುವುದಲ್ಲಾ ಎಂದು ಋಷಿಕುಮಾರನ ಮನಸ್ಸು ಕರುಣೆಗೀಡಾಯಿತು. ಅಷ್ಟರಲ್ಲಿ ಭಯಂಕರವಾದ ಸಿಂಹಗರ್ಜನೆಯು ಕೇಳಬಂತು. ಆ ಗರ್ಜನೆಗೆ ಹೆದರಿದ ಆನೆಯು ಸೊಂಡಿಲಲ್ಲಿದ್ದ ಮಗುವನ್ನು ಮೇಲಕ್ಕೆ ಹಾರಿಸಿ ಓಡಲಾರಂಭಿಸಿತು. ಅಷ್ಟು ಮೇಲಿನಿಂದ ಮಗು ಕೆಳಗೆ ಬಿದ್ದಿದ್ದರೆ ಅದರ ಒಂದು ಎಲುಬಾದರೂ ಸಿಕ್ಕುತ್ತಿರಲಿಲ್ಲ. ಆಯುಸ್ಸಿದ್ದರೆ ಎಂತಹ ವಿಪತ್ತಿನಲ್ಲೂ ಪ್ರಾಣಿಯು ಪ್ರಾಣದಿಂದ ಉಳಿಯುವುದಲ್ಲವೇ! ಆಕಾಶದಿಂದ ಕೆಳಕ್ಕೆ ಬೀಳುತ್ತಿದ್ದ ಮಗುವನ್ನು ದೊಡ್ಡ ಮರದ ಕೊಂಬೆಯಲ್ಲಿ ಕುಳಿತಿದ್ದ ವಾನರನೊಂದು ಮಾಗಿದ ಹಣ್ಣೆಂದು ಕೈಯಲ್ಲಿ ಹಿಡಿದುಕೊಂಡಿತು. ಆದರೆ ಅದರ ಆಸೆಗೆ ತಕ್ಕಂತೆ ಅದು ಹಣ್ಣಾಗಿರಲಿಲ್ಲ. ಕೂಡಲೆ ಅದು ಕೆಳಕ್ಕೆ ಎಸೆಯದೆ ಅಳುತ್ತಿದ್ದ ಆ ಮಗುವನ್ನು ಅಗಲವಾದ ಮರದ ಕೊಂಬೆಯ ಬುಡದಲ್ಲಿಟ್ಟು ಮತ್ತೊಂದು ಮರಕ್ಕೆ ಹಾರಿತು. ಸಿಂಹವು ಆನೆಯನ್ನು ಕೊಂದು ಎಲ್ಲಿಗೋ ಹೊರಟು ಹೋಯಿತು.

ಇದನ್ನೆಲ್ಲ ನೋಡುತ್ತಿದ್ದ ಮುನಿಕುಮಾರನು ಪೊದೆಯಿಂದ ಹೊರ ಹೊರಟು ಧೈರ್ಯದಿಂದ ಮುಂದಕ್ಕೆ ಸಾಗಿದನು. ಮಗು ಏನಾಯಿತೋ ನೋಡೋಣವೆಂದು ಕುತೂಹಲದಿಂದ ಮರವನ್ನು ಹತ್ತಿದನು. ಅಕಾರಣ ಕರುಣೆಗಳಲ್ಲವೇ ಸಜ್ಜನರು! ಮೆಲ್ಲಗೆ ಮಗುವನ್ನು ಕೆಳಕ್ಕೆ ಇಳಿಸಿದನು. ಅಳುತ್ತಿದ್ದ ಆ ಮಗು ಕೈಯಲ್ಲಿ ನಿಲ್ಲಲೊಲ್ಲದು. ಸುತ್ತ ಮುದುಕಿಯನ್ನು ಹುಡುಕಿದನು. ಎಲ್ಲಿಯೂ ಅವಳ ಸುಳಿವು ಕಾಣಲಿಲ್ಲ. ಆ ಮಗುವನ್ನು ಅಲ್ಲಿಯೇ ಬಿಡಲು ಮನಸ್ಸಿಲ್ಲದೆ ತನ್ನ ಗುರುಗಳಾದ ವಾಮದೇವ ಋಷಿಗಳ ಆಶ್ರಮಕ್ಕೆ ತಂದನು. ಆಕಳ ಹಾಲನ್ನು ಹಾಕಿ ಆ ಮಗುವನ್ನು ಸಮಾಧಾನ ಪಡಿಸಿದನು. ಬಳಿಕ ಗುರುಗಳ ಬಳಿಗೆ ಎತ್ತಿಕೊಂಡು ಬಂದನು. ನಡೆದ ಸಮಾಚಾರವನ್ನು ಗುರುಗಳಿಗೆ ವಿಜ್ಞಾಪಿಸಿದನು. ಸುಲಕ್ಷಣಗಳಿಂದ ತುಂಬಿದ್ದ ಆ ಮಗುವನ್ನು ಋಷಿಗಳು ದಿಟ್ಟಿಸಿ ನೋಡಿದರು. ಸ್ವಲ್ಪ ಹೊತ್ತು ಏನನ್ನೋ ಯೋಚಿಸಿದರು. ಆ ಮಗುವು ಯಾರೆಂಬುದನ್ನು ಜ್ಞಾನದೃಷ್ಟಿಯಿಂದ ಅರಿತ

ಮಹರ್ಷಿಗಳು ಶಿಷ್ಯನನ್ನು ಕುರಿತು "ವತ್ಸ! ನೀನು ಆಶ್ರಮದಲ್ಲಿರುವ ರಾಜ ಹಂಸನ ಬಳಿಗೆ ಹೋಗಿ ಹೀಗೆಂದು ಹೇಳು. ಸತಿಯೊಡನೆ ರತ್ನೋದ್ಭವನು ಹಿಂತಿರುಗಿ ಬರುತ್ತಿದ್ದಾಗ ಹಡಗು ಮುಳುಗಿತು. ಅವನ ತುಂಬು ಗರ್ಭದ ಹೆಂಡತಿಯು ಹಲಗೆಯ ಸಹಾಯದಿಂದ ದಡವನ್ನು ಸೇರಿದಳು. ಅವಳು ಹಡೆದ ಮಗುವಿದು. ಎಂದು ಹೇಳಿಕೊಟ್ಟು ಬಿಡು" ಎಂದನು.

ವಾಮದೇವ ಶಿಷ್ಯನು ಜಾಗ್ರತೆಯಾಗಿ ಮಗುವನ್ನು ತಂದು ರಾಜನಿಗೊಪ್ಪಿಸಿ ನಡೆದ ವೃತ್ತಾಂತವನ್ನೆಲ್ಲ ತಿಳಿಸಿದನು. ಆಶ್ಚರ್ಯಪಟ್ಟ ರಾಜನು ಆದರದಿಂದ ಮಗುವನ್ನು ಎತ್ತಿಕೊಂಡನು. ಪುಷ್ಪೋದ್ಭವನೆಂದು ಆ ಮಗುವಿಗೆ ನಾಮಕರಣ ಮಾಡಿದನು. ಪುಷ್ಪೋದ್ಭವನು ರಾಜವಾಹನನೊಂದಿಗೆ ಆಶ್ರಮದಲ್ಲೇ ಬಳೆದನು.

೨

ಸಮುದ್ರದಲ್ಲಿ ಹಡಗು ಮುಳುಗಿದ ಮೇಲೆ ರತ್ನೋದ್ಭವನೂ ಬಹಳ ಕಷ್ಟದಿಂದ ದಡವನ್ನು ಸೇರಿದನು. ತುಂಬು ಬಸಿರಿನ ಹೆಂಡತಿಯು ಸಮುದ್ರದ ಪಾಲಾದಳೋ ಏನೋ ಎಂದವನು ಹೆದರಿದನು. ಅನುಕೂಲೆಯಾದ ಸತಿಯ ಅಗಲಿಕೆಯು ಅವನನ್ನು ದುಃಖಿತನನ್ನಾಗಿಮಾಡಿತು. ಎಲ್ಲಿಯೂ ನೆಲೆಯಾಗಿ ನಿಲ್ಲಲು ಅವನ ಮನಸ್ಸು ಒಡಂಬಡಲಿಲ್ಲ. ದಿನಕ್ಕೊಂದು ಊರಿನಂತೆ ಅಲೆಯುತ್ತಾ ಯಾವನೋ ಒಬ್ಬ ಸಿದ್ಧತಾಪಸನ ಆಶ್ರಮವನ್ನು ಸೇರಿದನು. ತಪಸ್ವಿಯನ್ನು ಭಕ್ತಿಯಿಂದ ಸೇವಿಸುತ್ತ ಬಂದನು. ಮಹನೀಯರ ಪರಿಚರ್ಯೆಯಿಂದ ಅವನ ಮನಸ್ಸಿನಲ್ಲಿ ಸ್ವಲ್ಪ ಮಟ್ಟಿಗೆ ದುಃಖದ ಬೇಗೆಯು ಕಡಿಮೆಯಾಯಿತು. ಇವನ ಪರಿಚರ್ಯೆಗೆ ಮೆಚ್ಚಿದ ಸಿದ್ಧ ತಾಪಸನು. "ಹದಿನಾರು ವರ್ಷಗಳ ಅನಂತರ ನಿನ್ನ ಸತೀಸುತರೊಂದಿಗೆ ಸೇರುವೆ" ಎಂದು ಭವಿಷ್ಯವನ್ನು ನುಡಿದನು. ಆ ಕಾಲವನ್ನು ನಿರೀಕ್ಷಿಸುತ್ತ ರತ್ನೋದ್ಭವನು ಆ ಆಶ್ರಮದಲ್ಲಿಯೇ ಇದ್ದನು.

ಇತ್ತ ರಾಜವಾಹನನೊಂದಿಗೆ ಬಳೆಯುತ್ತಿದ್ದ ಪುಷ್ಪೋದ್ಭವನು ಕುಮಾರನೊಂದಿಗೆ ಸಕಲ ವಿದ್ಯೆಗಳನ್ನೂ ಕಲಿತು ಅವನು ವಿಜಯ ಯಾತ್ರೆಗೆ

ಹೊರಟಾಗ ಇತರ ಕುಮಾರರಂತೆ ತಾನೂ ಅವನ ಜತೆಯಲ್ಲಿ ಹೊರಟನು. ರಾತ್ರಿ ಸೈನ್ಯದ ಬೀಡನ್ನು ಬಿಟ್ಟು ಹೊರಟುಹೋದ ರಾಜವಾಹನನನ್ನು ಬೆಳಗ್ಗೆ ಯಾರೂ ಕಾಣಲಿಲ್ಲ. ಒಡನಿದ್ದ ಮಂತ್ರಿಕುಮಾರರು ರಾಜಪುತ್ರನನ್ನು ಬಿಟ್ಟು ರಾಜನ ಬಳಿಗೆ ಹಿಂತಿರುಗಲು ಇಚ್ಛೆಯಿಲ್ಲದೆ ಅವನನ್ನೇ ಅರಸುತ್ತಾ ಒಬ್ಬೊಬ್ಬರು ಒಂದೊಂದು ಮಾರ್ಗವನ್ನು ಹಿಡಿದರು. ಪುಷ್ಪೋದ್ಭವನೂ ಅವಂತಿಯ ಮಾರ್ಗವಾಗಿ ಹೊರಟನು.

ನಡು ಹಗಲು. ತಪನನು ತನ್ನ ಪ್ರತಾಪವನ್ನು ಸಂಪೂರ್ಣವಾಗಿ ತೋರುತ್ತಿರುವಂತೆ ಚಂಡ ಕಿರಣಗಳನ್ನು ಸುತ್ತ ಹರಡಿದ್ದನು. ದಾರಿ ನಡೆದು ಬಳಲಿದ್ದ ಪುಷ್ಪೋದ್ಭವನು ಮುಂದೆ ನಡೆಯಲಾರದೆ ಎಲ್ಲಿಯಾದರೂ ವಿಶ್ರಮಿಸಿ ಕೊಳ್ಳಬೇಕೆಂದು ಗಿಡದ ನೆರಳನ್ನು ಹುಡುಕಿದನು. ಸಮೀಪದಲ್ಲಿ ಒಂದು ಬೆಟ್ಟ. ಅದರಲ್ಲಿ ಎತ್ತರವಾದ ಬಂಡೆಯೊಂದು ಮುಂದಕ್ಕೆ ಚಾಚಿ ಬಹು ದೂರದವರೆಗೆ ನೆರಳನ್ನುಂಟುಮಾಡಿತ್ತು. ಕೆಳಗಣ ಭೂಮಿಗೂ ಆ ಬಂಡೆಯ ಮೇಲ್ಭಾಗಕ್ಕೂ ಬಹಳ ಅಂತರವಿದ್ದಿತು. ಯಾರಾದರೂ ಆ ಬಂಡೆಯ ಮೇಲಿನಿಂದ ಜಾರಿದ್ದರೆ ಕೆಳಗಣ ಕಣಿವೆಯಲ್ಲಿ ನುಚ್ಚುನೂರಾಗುತ್ತಿದ್ದರು. ಪುಷ್ಪೋದ್ಭವನು ಆ ಬಂಡೆಯ ನೆರಳು ಬೀಳುತ್ತಿದ್ದ ಕಡೆ ಕೊನೆಯಲ್ಲಿ ಒಂದು ಗಿಡದ ಬುಡದಲ್ಲಿ ಕುಳಿತನು.

ಒಂದು ಕ್ಷಣಕಾಲ ಅವನು ಅಲ್ಲಿ ಕುಳಿತಿರಬಹುದು. ಅಷ್ಟರಲ್ಲಿ ಅವನ ದೃಷ್ಟಿಯು ಆಕಾಶದ ಕಡೆಗೆ ತಿರುಗಿತು. ಇದ್ದಕ್ಕಿದ್ದ ಹಾಗೇ ಅವನ ಮುಂದೆ ಮನುಷ್ಯನ ನೆರಳು ಕಂಡಿತು. ಅದರ ಅವಯವಗಳೊಂದೂ ಕಾಣು ತ್ತಿರಲಿಲ್ಲ. ಅವಯವಗಳನ್ನು ಸಂಕೋಚ ಮಾಡಿಕೊಂಡ ಆಮೆಯ ಆಕಾರ ದಂತೆ ಅದು ಕಾಣುತ್ತಿತ್ತು. ಇದು ಏನೆಂದು ತಿಳಿಯುವ ಕುತೂಹಲ ದಿಂದಲೇ ಅವನು ತನ್ನ ಕಣ್ಣುಗಳನ್ನು ಆಕಾಶದ ಕಡೆಗೆ ತಿರುಗಿಸಿದುದು. ಬಹಳ ಎತ್ತರದಿಂದ ಬೀಳುತ್ತಿದ್ದ ಆ ಪದಾರ್ಥವನ್ನು ಮೊದಲು ಅವನು ಮನುಷ್ಯ ದೇಹವೆಂದು ತಿಳಿಯಲಾಗಲಿಲ್ಲ. ಕ್ರಮಕ್ರಮವಾಗಿ ಮನುಷ್ಯನೆಂದು ತಿಳಿದನು. ಆ ವೇಗದಲ್ಲಿ ಆತನು ಭೂಮಿಯಲ್ಲಿ ಬಿದ್ದರೆ ಉಳಿಯುವುದಿಲ್ಲ ವೆಂದು ಬಗೆದ ಪುಷ್ಪೋದ್ಭವನು ಕೂಡಲೇ ಎದ್ದು ಬಂದು ಮಧ್ಯದಲ್ಲೇ ಹಿಡಿದನು. ನವತಾರುಣ್ಯದಿಂದಿದ್ದ ಅವನಿಗೆ ಆ ಮನುಷ್ಯನನ್ನು ಹಿಡಿಯು

ವುದು ಕಷ್ಟವಾಗಲಿಲ್ಲ. ಹಿಡಿದವನೇ ಅವನನ್ನು ಮೆಲ್ಲಗೆ ನೆಲದ ಮೇಲೆ ಮಲಗಿಸಿದನು. ಅಷ್ಟೊಂದು ಎತ್ತರದಿಂದ ಬಿದ್ದುದರಿಂದ ಆ ಮನುಷ್ಯನು ನಿಶ್ಚೇತನನಾಗಿದ್ದನು.

ಪುಷ್ಪೋದ್ಭವನು ತನ್ನ ಆಕಾರ ಸಾದೃಶ್ಯವನ್ನು ಆತನಲ್ಲಿ ಕಂಡರೂ ಆ ವಿಷಯವಾಗಿ ಯೋಚಿಸದೆ ಮೊದಲು ಶೈತ್ಯೋಪಚಾರದ ಕಡೆ ಗಮನ ವಿತ್ತನು. ಸ್ವಲ್ಪ ಹೊತ್ತಿನ ಮೇಲೆ ಆ ಮನುಷ್ಯನ ಕಣ್ಣುಗಳು ಅರಳಿದುವು. ಮೆಲ್ಲಮೆಲ್ಲನೆ ಅವನ ಅವಯವಗಳಲ್ಲಿ ಚೈತನ್ಯ ಮೂಡಿತು. ಅವನ ಕಣ್ಣು ಗಳಿಂದ ಧಾರಾಕಾರವಾಗಿ ನೀರು ಸುರಿಯಲಾರಂಭಿಸಿತು. ಅವನು ದೈನ್ಯ ದಿಂದ ಒಮ್ಮೆ ಪುಷ್ಪೋದ್ಭವನ ದೇಹವನ್ನು ಕಾಲಿನಿಂದ ಹಿಡಿದು ತಲೆಯ ವರೆಗೂ ನೋಡಿದನು. ಪ್ರಾಣರಕ್ಷಕನಲ್ಲಿ ತೋರಬೇಕಾಗಿದ್ದ ಕೃತಜ್ಞತೆಯ ನೋಟಕ್ಕೆ ಬದಲು ಅವನ ನೋಟದಲ್ಲಿ ದುಃಖವೇ ಮೂಡಿ ಕಾಣುತ್ತಿತ್ತು. ಸ್ವಲ್ಪ ಹೊತ್ತು ವಿಶ್ರಾಂತಿಯನ್ನು ಹೊಂದಿದ ಮೇಲೆ ಆ ಮನುಷ್ಯನು ಎದ್ದು ಕುಳಿತನು. ಮಹತ್ತರವಾದ ದುಃಖವಿಲ್ಲದಿದ್ದರೆ ಯಾರೂ ಈ ಬಗೆಯ ಸಾಹಸಕ್ಕೆ ಕೈಹಾಕರೆಂದು ಪುಷ್ಪೋದ್ಭವನು ಆಲೋಚಿಸಿ ಅವನ ದುಃಖಕ್ಕೆ ಮತ್ತು ಈ ಸಾಹಸ ಕೆಲಸಕ್ಕೆ ಕಾರಣವನ್ನು ಕೇಳಿದನು.

ಕಣ್ಣುಗಳಿಂದ ಉರುಳುತ್ತಿದ್ದ ಬಿಸಿನೀರಿನ ಕಣಗಳನ್ನು ಕೈಯಿಂದ ಮಿಡಿಯುತ್ತಾ ಆ ಪುರುಷನು 'ತರುಣನೇ! ನನ್ನ ವಿಧಿಯನ್ನೇನೆಂದು ಹೇಳಲಿ. ನಾನೊಬ್ಬ ರತ್ನವ್ಯಾಪಾರಿಯು. ನಾನು ತುಂಬು ಬಸಿರಿನ ಸತಿ ಯೊಡನೆ ಬರುತ್ತಿದ್ದಾಗ ಸಮುದ್ರದಲ್ಲಿ ಹಡಗು ಮುಳುಗಿ ಸತಿಯನ್ನಗಲಿ ಇಂದಿಗೆ ಹದಿನಾರು ವರ್ಷಗಳ ಮೇಲಾದುವು. ಹದಿನಾರು ವರ್ಷಗಳ ಅನಂತರ ನಿನ್ನ ಸತೀ ಸುತರನ್ನು ಸೇರುವೆಯೆಂದು ಹೇಳಿದ ಸಿದ್ಧತಾಪಸನ ಮಾತೂ ನಿಜವಾಗುವ ಕುರುಹು ಕಾಣಲಿಲ್ಲ. ಹೀಗೆ ಸರ್ವಸ್ವವನ್ನೂ ಕಳೆದು ಕೊಂಡು ಜೀವಿಸುವುದು ಸರಿಯಲ್ಲವೆಂದು ಬಗೆದು ಇಂದು ಮನಸ್ಸು ದೃಢ ಮಾಡಿ ಈ ಬಂಡೆಯಿಂದ ಹಾರಿದೆನು. ವಿಧಿಯು ಅಲ್ಲೂ ವಿಮುಖನಾದ್ದ ರಿಂದ ನಿನ್ನಿಂದ ನನ್ನನ್ನು ಉಳಿಸಿದನು. ಮಂದಭಾಗ್ಯನಾದ ಈ ರತ್ನೋ ದ್ಭವನಿಗೆ ಸಾವೂ ಬರಲಿಲ್ಲ'ವೆಂದು ನೊಂದು ನುಡಿದನು. ಪುಷ್ಪೋದ್ಭವನ ಸಂದೇಹವು ಪರಿಹಾರವಾಯಿತು. ಕತೆಯು ತನ್ನ ವಿಷಯವನ್ನೇ ಅನು

ಕರಿಸುತ್ತಿದೆಯೆಂದು ಆಲೋಚಿಸುತ್ತಿದ್ದ ಅವನ ಸಂದೇಹವು ರತ್ನೋದ್ಭವನೆಂಬ ಹೆಸರು ಕಿವಿಗೆ ಬಿದ್ದ ಕೂಡಲೆ ಹಾರಿಹೋಯಿತು. ಕುಲಶೀಲಗಳನ್ನರಿತ ಮೇಲಂತೂ ತನ್ನ ತಂದೆಯೇ ಈತನೆಂದರಿತನು. ಆದರೂ ಆಗಲೇ ತನ್ನ ಪರಿಚಯವನ್ನು ಹೇಳಿಕೊಳ್ಳಲಿಲ್ಲ.

ಇಬ್ಬರೂ ಸಾಕಾದಷ್ಟು ವಿಶ್ರಾಂತಿಯನ್ನು ಹೊಂದಿದರು. ಇನ್ನೇನು ಮುಂದಕ್ಕೆ ಹೊರಡಲು ಪ್ರಯತ್ನಿಸಬೇಕೆಂಬುವಷ್ಟರಲ್ಲಿ ದೂರದಲ್ಲಿ ಯಾರೋ ಒಬ್ಬ ಹೆಂಗಸು ಕೂಗಿಕೊಳ್ಳುತ್ತಿದ್ದ ದನಿಯು ಕಿವಿಗೆ ಬಿತ್ತು. "ಸಿದ್ಧತಾಪಸನ ಮಾತಿನಂತೆ ಪತಿಪುತ್ರರ ಸಮಾಗಮವಾಗುವ ಈ ಕಾಲದಲ್ಲಿ ನೀನು ಪ್ರಾಣ ಬಿಡುವುದುಚಿತವಲ್ಲ: ಎಂದು ಯಾರೋ ಸಮಾಧಾನ ಮಾಡುತ್ತಿದ್ದ ಮಾತು ಗಳೂ ಕಿವಿಗೆ ಬಿದ್ದುವು. ಕೂಡಲೆ ಇಬ್ಬರೂ ಆ ದನಿಯತ್ತ ಸಾಗಿದರು. ಸ್ವಲ್ಪ ದೂರ ಹೋಗುವುದರೊಳಗಾಗಿ ಭಯಂಕರವಾದ ಬೆಂಕಿಯ ಜ್ವಾಲೆ ಕಣ್ಣಿಗೆ ಕಾಣಿಸಿತು. ಸ್ತ್ರೀಯೊಬ್ಬಳು ಬೆಂಕಿಗೆ ಬಲವಂದು ಕೈಯನ್ನು ಜೋಡಿಸಿ ನಿಂತಿದ್ದಳು. ಸಮೀಪದಲ್ಲಿದ್ದ ಒಬ್ಬ ವೃದ್ಧೆಯು ಆ ಲಲನೆಯ ಕೈಗಳನ್ನು ಹಿಡಿದು ಆಕೆಯನ್ನು ಹಿಂದಕ್ಕೆ ಎಳೆಯುತ್ತಿದ್ದಳು. ಆಕೆಯನ್ನು ಸಮೀಪಿಸಿದ ರತ್ನೋದ್ಭವನು ತನ್ನ ಸತಿಯಾದ ಸುವೃತ್ತೆಯೆಂದು ಗುರುತು ಹಿಡಿದನು. ಆಕಸ್ಮಿಕವಾಗಿ ಪತಿಯನ್ನು ಕಂಡ ಸುವೃತ್ತೆಯೂ ವಿಸ್ಮಿತಳಾಗಿ ಅಗ್ನಿಸಾಕ್ಷಿಕವಾಗಿ ಆದ ಪತಿ ಸಮಾಗಮವನ್ನು ಮನಸ್ಸಿನಲ್ಲೇ ಹೊಗಳುತ್ತಾ ಪತಿಯ ಪಾದಕ್ಕೆ ಎರಗಿದಳು.

ವೃದ್ಧೆಯೂ ರತ್ನೋದ್ಭವನನ್ನು ಗುರುತಿಸಿ ಸುವೃತ್ತಳ ಸ್ಥಿತಿಯನ್ನು ವಿವರಿಸಿದಳು. ಸತಿಪತಿಗಳು "ಮದಗಜಕ್ಕೆ ಸಿಕ್ಕಿದ ಶಿಶುವು ಬದುಕುವು ದೆಲ್ಲಿ ಬಂತು? ಮಂದಭಾಗ್ಯರಾದ ನಮಗೆ ಸತ್ಪುತ್ರ ಭಾಗ್ಯವಿಲ್ಲ" ಎಂದು ನೊಂದುಕೊಂಡರು. ವೃದ್ಧೆಯು "ವಿಧಿಯ ವಿಲಾಸವನ್ನು ಬಲ್ಲವರಾರು? ಆಯುಸ್ಸಿದ್ದಲ್ಲಿ ಶಿಶುಹೇಗಾದರೂ ಬದುಕಿರಬಹುದು. ಅಕಸ್ಮಾತ್ತಾಗಿ ನೀವಿ ಬ್ಬರೂ ಸೇರಿದಂತೆ ನಿಮಗೆ ಪುತ್ರ ಸಮಾಗಮವೂ ಒಂದು ಕಾಲದಲ್ಲಿ ಆಗ ಬಹುದಲ್ಲವೇ?" ಎಂದು ಅವರನ್ನು ಸಮಾಧಾನಪಡಿಸಿದಳು. ದಂಪತಿಗಳ ದೃಷ್ಟಿ ಸಮೀಪದಲ್ಲಿದ್ದ ತರುಣನ ಸುಂದರ ದೇಹದ ಮೇಲೆ ಬೀಳುವಷ್ಟರಲ್ಲಿ ಪುಷ್ಪೋದ್ಭವನು ತನ್ನ ತಂದೆತಾಯಿಗಳಿಗೆ ನಮಸ್ಕರಿಸಿ ತನ್ನ ವೃತ್ತಾಂತವನ್ನು

ವಿವರಿಸಿದನು. ಸತೀಸುತರಿಂದ ಕೂಡಿದ ರತ್ನೋದ್ಭವನು ಅತ್ಯಂತ ಹರ್ಷ ದಿಂದ ರಾಜಹಂಸನ ವಿಷಯವನ್ನು ಕೇಳಿ ತಿಳಿದನು. ದುಃಖವು ದುಃಖವನ್ನೇ ತರುವಂತೆ ಸುಖವೂ ಸುಖವನ್ನು ತರುವುದಲ್ಲವೇ! ಇಂದಿನಿಂದ ಅಭ್ಯುದಯವು ಉದಯವಾಗುವ ಕಾಲವೆಂದು ಅವರೆಲ್ಲರೂ ತಿಳಿದು ಸಮೀಪದ ಋಷಿಯ ಆಶ್ರಮವನ್ನು ಹೊಕ್ಕರು.

೩

ಇಷ್ಟು ದಿನಗಳಾದರೂ ಪುಷ್ಪೋದ್ಭವನ ಇಚ್ಛೆಯು ನೆರವೇರುವ ಕುರುಹು ಕಾಣಲಿಲ್ಲ. ಅವನು ರಾಜವಾಹನನನ್ನು ಹುಡುಕುತ್ತ ಹೊರಟಿದ್ದನು. ತಂದೆ ತಾಯಿಗಳು ದೊರೆತರೇ ವಿನಾ ರಾಜಪುತ್ರನು ಸಿಗಲಿಲ್ಲ. ಹೇಗಾದರೂ ರಾಜ ಪುತ್ರನನ್ನು ಕಾಣಬೇಕೆಂಬ ತವಕವು ಅವನನ್ನು ಬಾಧಿಸುತ್ತಿತ್ತು. ಆದರೆ ಅದಕ್ಕೆ ಏನು ಮಾಡಬೇಕೆಂದು ಅವನಿಗೆ ತೋರಲಿಲ್ಲ. ತಾಯಿತಂದೆಗಳನ್ನು ಆಶ್ರಮದಲ್ಲಿಯೇ ಬಿಟ್ಟು ಅವರ ಅಪ್ಪಣೆಪಡೆದು ಮತ್ತೆ ಮುಂದೆ ಸಾಗಿದನು. ಅವನ ಮನಸ್ಸಿನಲ್ಲಿ ಹೀಗೆ ಆಲೋಚನೆಗಳು ಮೂಡಿದುವು—"ಯಾವ ಕೆಲಸ ವನ್ನು ಸಾಧಿಸಬೇಕಾದರೂ ಜನ ಸಹಾಯ ಮತ್ತು ಧನಸಹಾಯವು ಅಗತ್ಯ. ಹೊಟ್ಟಿಲ್ಲದಿದ್ದರೂ ಅಕ್ಕಿ ಬೆಳೆಯುವುದಿಲ್ಲವಲ್ಲವೇ! ಎಂತಹ ಅಸಹಾಯ ಶೂರರೂ ಕಾರ್ಯಸಾಧನೆಗಾಗಿ ಮತ್ತೊಬ್ಬರನ್ನು ಆಶ್ರಯಿಸಬೇ ಬೇಕು. ಧನ ವಂತೂ ಜಗತ್ತಿನ ಜೀವಾಳ. ಎಲ್ಲವನ್ನೂ ಸಾಧಿಸುವ ಶಕ್ತಿಯು ಅದರಲ್ಲಿ ಅಡಗಿದೆ. ವಿಶ್ವಕಾರಣನಾದ ಭಗವಂತನು ತನ್ನ ಶಕ್ತಿಯನ್ನು ಹುದುಗಿಸಿ ಇಟ್ಟಿರುವ ಅವನ ಪ್ರತಿನಿಧಿಯೇ ಹಣ. ಹಣವು ಹೊರಗಿನ ಪ್ರಾಣ. ಹಣ ವಿಲ್ಲದವನು ಪ್ರಾಣವಿಲ್ಲದವನೇ ಸರಿ. ಆದ್ದರಿಂದ ಈಗ ನನ್ನ ಮೊದಲನೆಯ ಕೆಲಸವು ಹಣವನ್ನೂ ಜನವನ್ನೂ ಸಂಪಾದಿಸುವುದು." ಹೀಗೆಂದು ಆಲೋಚಿಸಿ ಅವನು ಸಹಾಯಮಾಡಲು ಸಮರ್ಥರಾದ ಅನೇಕ ಶಿಷ್ಯರನ್ನು ಸಂಪಾದಿಸಿದನು. ಶಿಷ್ಯರನ್ನು ಸಂಪಾದಿಸಿದನು. ಶಿಷ್ಯ ಸಂಪತ್ತು ದೊರೆತ ಮೇಲೆ ಅವನು ಹಣಸಂಪಾದನೆಗೆ ಗಮನವಿತ್ತನು.

ಅಲ್ಪ ಸ್ವಲ್ಪ ಹಣದಿಂದ ಮಹಾಕಾರ್ಯವನ್ನು ಸಾಧಿಸಲಾಗುವುದಿಲ್ಲ. ಅಲ್ಪಕಾಲಾವಧಿಯಲ್ಲಿ ಹೆಚ್ಚು ಹಣಸಂಪಾದಿಸುವುದು ಸಾಧ್ಯವಲ್ಲ. ಆದ್ದರಿಂದ ಅವನು ಹಣಸಂಪಾದನೆಗೆ ಬೇರೊಂದು ಉಪಾಯವನ್ನು ಹುಡುಕಿದನು. ವಿಂಧ್ಯಾರಣ್ಯವು ಗಹನವಾಗಿದ್ದರೂ ಹಿಂದೆ ಅಲ್ಲಿ ಅನೇಕ ಸುಪ್ರಸಿದ್ಧ ರಾಜಧಾನಿಗಳಿದ್ದುವು. ಕಾಲಚಕ್ರವು ಉರುಳಿದಂತೆಲ್ಲ ಆ ರಾಜಧಾನಿಗಳು ಪಾಳು ಬಿದ್ದು ನೆಲದಲ್ಲಿ ಸೇರಿಹೋಗಿದ್ದುವು. ಹೀಗೆ ಆ ರಾಜಧಾನಿಗಳಲ್ಲಿದ್ದ ಅಪಾರವಾದ ಐಶ್ವರ್ಯವು ನೆಲದ ಪಾಲಾಗಿದ್ದುದು ಅವನಿಗೆ ತಿಳಿದಿದ್ದಿತು. ಚಕ್ರಾಧಿಪತ್ಯದ ಭಂಡಾರಗಳು ಹಾಗೆ ಹಾಗೆ ನೆಲದಲ್ಲಿ ಹೂತು ಹೋಗಿದ್ದುವು. ಅವುಗಳ ಮೇಲೆ ಮುಗಿಲು ಮುಟ್ಟುವಂತೆ ಬೆಳೆದಿದ್ದ ಹೆಮ್ಮರಗಳು ಆಕಾಶಕ್ಕೂ ಭೂಮಿಗೂ ಸಂಬಂಧವನ್ನು ಉಂಟುಮಾಡುವ ಸ್ತಂಭಗಳಂತೆ ನಿಂತಿದ್ದುವು. ಅಲ್ಲಲ್ಲಿ ಆ ಮರಗಳ ಬುಡಗಳಲ್ಲಿರುವ ದೊಡ್ಡ ದೊಡ್ಡ ಬಿಲಗಳಲ್ಲಿ ಹಣದ ಬಂಡಾರವನ್ನು ಕಾಯುವ ಕಾವಲುಗಾರರಂತೆ ಘಟಸರ್ಪಗಳು ವಾಸಿಸುತ್ತಿದ್ದುವು. ಇವನ್ನು ಪ್ರತಿದಿನವೂ ನೋಡುತ್ತಿದ್ದ ಅವನ ಮನಸ್ಸಿನಲ್ಲಿ ಅಲ್ಲಿ ಎಲ್ಲಿಯೋ ಹಣದ ಬಂಡಾರವು ನೆಲದಲ್ಲಿ ಹುದುಗಿದ್ದಂತೆ ತೋರುತ್ತಿತ್ತು. ಆದರೆ ಇದೆಯೋ ಇಲ್ಲವೋ ಎಂಬ ನಿಶ್ಚಯವು ಹೇಗಾಗಬೇಕು ? ಅದನ್ನು ತಿಳಿಯುವ ಸಲುವಾಗಿ ಅವನು ಸಿದ್ಧಾಂಜನವನ್ನು ತಂದು ಕೈಯ ಹೆಬ್ಬೆರಳಿನ ಉಗುರಿಗೆ ಹಚ್ಚಿ ನೋಡಿದನು. ಅಲ್ಲೊಂದು ದೊಡ್ಡ ಮರದ ಬುಡದಲ್ಲಿ ಕೊಪ್ಪರಿಗೆಯ ತುಂಬ ಹಣವಿದ್ದುದು ಕಂಡುಬಂದಿತು. ಅದನ್ನು ವಶಪಡಿಸಿಕೊಂಡರೆ ಸಾಕೆಂದು ಬಗೆದು ಶಿಷ್ಯಸಹಾಯದಿಂದ ಆ ಮರದ ಬುಡದಲ್ಲಿದ್ದ ಬಿಲವನ್ನು ದೊಡ್ಡದಾಗಿ ಅಗೆದನು. ಬಿಲವು ದೊಡ್ಡದಾದಂತೆಲ್ಲ ಅಲ್ಲಿ ವಾಸಿಸುತ್ತಿದ್ದ ಕೃಷ್ಣಸರ್ಪದ ವಿಷಪೂರಿತವಾದ ನಿಟ್ಟುಸಿರು ಹೆಚ್ಚಾಗತೊಡಗಿತು. ಅಗೆಯಲು ಉಪಯೋಗಿಸುತ್ತಿದ್ದ ಪಿಕಾಸಿ ಗುದ್ದಲಿಗಳಿಂದಲೇ ಆ ಸರ್ಪವನ್ನು ಮುಗಿಸಿಬಿಟ್ಟನು. ಶಿಷ್ಯರೆಲ್ಲರನ್ನೂ ಕರೆದು ಸುತ್ತಾ ನಿಲ್ಲುವಂತೆ ಅವನು ಹೇಳಿದನು. ಅವರು ಸುತ್ತುಗಟ್ಟಿ ನಿಂತರು. ಪುಷ್ಪೋದ್ಭವನು ಬಿಲದೊಳಕ್ಕೆ ಇಳಿದು ಕೊಪ್ಪರಿಗೆಯ ತುಂಬ ತುಂಬಿದ್ದ ದೀನಾರಗಳನ್ನು ತೆಗೆದು ಶಿಷ್ಯನೊಬ್ಬನ ಕೈಗೆ ಕೊಡುತ್ತ ಬಂದನು. ನೆಲದಮೇಲೆ ದೊಡ್ಡ ರಾಶಿಯಾಗಿ ನಾಣ್ಯಗಳು ಬಿದ್ದುವು. ಆದರೂ ಕೊಪ್ಪರಿಗೆಯು

ಬರಿದಾಗಲಿಲ್ಲ. ಹೆಚ್ಚು ಹಣವನ್ನು ತೆಗೆದುಕೊಂಡು ಹೋಗುವುದು ಕಷ್ಟವೆಂದು ತಿಳಿದು ಮುಂದೆ ಎಂದಾದರೂ ಉಪಯೋಗಿಸಿಕೊಳ್ಳಬೇಕಾದ ಸಮಯ ಒದಗಿದಾಗ ಉಪಯೋಗಿಸಿಕೊಳ್ಳೋಣವೆಂದು ಅಷ್ಟಕ್ಕೇ ನಿಲ್ಲಿಸಿ ಆ ಬಿಲವನ್ನು ಮೊದಲಿನಂತೆ ಮುಚ್ಚಿಬಿಟ್ಟನು.

ಚಂದ್ರಪಾಲನೆಂಬ ದೊಡ್ಡ ವರ್ತಕನೊಬ್ಬನು ತನ್ನ ಸಹಾಯಕ ವರ್ತಕರೊಂದಿಗೆ ಬೆಲೆಬಾಳುವ ವಸ್ತುಗಳ ಮಾರಾಟಕ್ಕೆಂದು ಅವಂತೀ ನಗರಕ್ಕೆ ಹೋಗುತ್ತಾ ಆ ಅರಣ್ಯದಲ್ಲಿ ಬೀಡುಬಿಟ್ಟನು. ಹಣದ ರಾಶಿಯನ್ನು ಊರುಸಾಗಿಸುವುದು ಹೇಗೆಂದು ಯೋಚಿಸುತ್ತಿದ್ದ ಪುಷ್ಪೋದ್ಭವನಿಗೆ ಒಳ್ಳೆಯ ಸಮಯದಲ್ಲಿ ಈ ವಣಿಕ್ಕಟಕವು ಕಾಣಿಸಿತು. ಕೂಡಲೆ ಅವನು ವರ್ತಕರ ಗುಂಪಿನೆಡೆಗೆ ಬಂದನು. ಕೆಲವಾರು ಮಾತುಗಳಿಂದಲೇ ಅವರಿಬ್ಬರಿಗೂ ಗಾಢವಾದ ಸ್ನೇಹವುಂಟಾಯಿತು. ಜಗಳಕ್ಕೂ ಗೆಳೆತನಕ್ಕೂ ಮಾತೇ ಕಾರಣವಲ್ಲವೇ! ಸಜ್ಜನರ ಸ್ನೇಹವು ಅಲ್ಪಕಾಲದಲ್ಲೇ ರೂಪುಗೊಂಡರೂ ಚಿರಸ್ಥಾಯಿಯಾಗಿರುವುದು. ಚಂದ್ರಪಾಲನ ಬಳಿಯಲ್ಲಿದ್ದ ಉತ್ತಮವಾದ ರಾಸುಗಳನ್ನೂ ಹಣತುಂಬಲು ಬೇಕಾದ ಗೋಣೀಚೀಲಗಳನ್ನೂ ಪುಷ್ಪೋದ್ಭವನು ಬೆಲೆಕೊಟ್ಟು ಕೊಂಡುಕೊಂಡನು. ಆ ದೊಡ್ಡ ಹಣದರಾಶಿಯನ್ನು ಗೋಣಿಗಳಲ್ಲಿ ತುಂಬಿ ಎತ್ತುಗಳ ಮೇಲೆ ಹೇರಿ ಅದೇ ಸಾರ್ಥದೊಂದಿಗೆ ಶಿಷ್ಯರ ಜೊತೆಯಲ್ಲಿ ಅವಂತೀ ನಗರಿಯನ್ನು ಸೇರಿದನು.

ಚಂದ್ರಪಾಲನ ತಂದೆಯಾದ ಬಂಧುಪಾಲನು ಬಹಳ ಗುಣವಂತನು. ಆ ವಣಿಗ್ವರನು ಪುಷ್ಪೋದ್ಭವನನ್ನು ಸಕಲವಿಧದಿಂದ ಉಪಚರಿಸಿ ಕೆಲವುದಿನ ತನ್ನ ಮನೆಯಲ್ಲೇ ಇರಿಸಿಕೊಂಡನು. ಬರಬರುತ್ತಾ ಪುಷ್ಪೋದ್ಭವನೊಬ್ಬ ಗಣ್ಯವರ್ತಕನೆನಿಸಿದನು. ಬಂಧು ಪಾಲನು ಇವನನ್ನು ರಾಜನಾದ ಮಾನಸಾರನ ಆಸ್ಥಾನಕ್ಕೆ ಕರೆದೊಯ್ದು ರಾಜಮನ್ನಣೆಯನ್ನೂ ದೊರಕಿಸಿಕೊಟ್ಟನು. ಅಲ್ಲಿಂದ ಮುಂದೆ ಪುಷ್ಪೋದ್ಭವನು ಬೇರೊಂದು ದೊಡ್ಡ ಭವನದಲ್ಲಿ ವಾಸಿಸ ತೊಡಗಿದನು. ಆದರೂ ತನ್ನ ವಿಷಯವನ್ನು ಯಾರಿಗೂ ತಿಳಿಸದೆ ಗೂಢವಾಗಿಟ್ಟಿದ್ದನು. ಕಾಲಕ್ರಮದಲ್ಲಿ ಆಶ್ರಮದಿಂದ ತಂದೆತಾಯಿಗಳನ್ನೂ ಅಲ್ಲಿಗೇ ಬರಮಾಡಿಕೊಂಡನು.

ಮಿತ್ರನಾದ ರಾಜಪುತ್ರನನ್ನು ಕಾಣದಿದ್ದ ಪುಷ್ಪೋದ್ಭವನಿಗೆ ಐಶ್ವರ್ಯ ದಿಂದಲೂ ಮನಶ್ಶಾಂತಿಯೊದಗಲಿಲ್ಲ. ಅವನು ಪ್ರತಿದಿನವೂ ಗೆಳೆಯನನ್ನು ಹುಡುಕಿಕೊಂಡು ಅರಣ್ಯಕ್ಕೆ ಹೋಗಿ ಬರುತ್ತಿದ್ದನು. ಹೀಗೆ ಕಷ್ಟ ಪಡುತ್ತಿದ್ದ ಪುಷ್ಪೋದ್ಭವನನ್ನು ಬಂಧುಪಾಲನು ಕಂಡು "ಮಿತ್ರನೇ ನೀನು ನಿನ್ನ ಗೆಳೆಯನಿಗಾಗಿ ಭೂಮಂಡಲವನ್ನೆಲ್ಲ ಸುತ್ತಬಲ್ಲೆಯಾ? ಅದು ಆಗದ ಕೆಲಸ. ಆದ್ದರಿಂದ ಉದ್ವೇಗವನ್ನು ಬಿಟ್ಟು ಸುಮ್ಮನಿರು. ನನಗೆ ಶಕುನ ಶಾಸ್ತ್ರದಲ್ಲಿ ಪರಿಚಯವುಂಟು. ಶುಭಶಕುನವೊದಗಿದಾಗ ನಿನ್ನ ಗೆಳೆಯ ರಾಜಪುತ್ರ ನನ್ನು ನೀನು ಕಾಣುವ ಶುಭದಿನವನ್ನು ತಿಳಿಸುತ್ತೇನೆ" ಎಂದನು. ಈ ಮಾತು ಗಳು ಪುಷ್ಪೋದ್ಭವನಿಗೆ ಅಮೃತದಂತಿದ್ದುವು. ಅವನು ಯಾವಾಗಲೂ ಬಂಧು ಪಾಲನ ಜತೆಯಲ್ಲೇ ಇರುತ್ತ ಬಂದನು. ಆದರೂ ಶುಭಶಕುನಗಳು ಗೋಚರ ವಾಗಲಿಲ್ಲ.

ಒಂದು ದಿನ ಬಂಧುಪಾಲನೂ ಪುಷ್ಪೋದ್ಭವನೂ ಅವಂತೀನಗರದ ಉದ್ಯಾನಕ್ಕೆ ಬಂದರು. ಅಲ್ಲೊಂದು ದೊಡ್ಡ ಮರದಲ್ಲಿ ಅನೇಕ ಹಕ್ಕಿಗಳು ಕುಳಿತಿದ್ದುವು. ಅವುಗಳ ಚಿಲಿಪಿಲಿ ಶಬ್ದವನ್ನು ಕೇಳಿ ಬಂಧುಪಾಲನು ಆ ಮರದ ಕೆಳಗೆ ಕುಳಿತನು. ಅವನು ಅವಧಾನದಿಂದ ಹಕ್ಕಿಗಳ ದನಿಯ ನ್ನಾಲಿಸುತ್ತಿದ್ದನು. ಮಧ್ಯೆ ಪುಷ್ಪೋದ್ಭವನೇನಾದರೂ ಮಾತನಾಡ ತೊಡ ಗಿದರೆ ಕೈಯಿಂದ ಸನ್ನೆಮಾಡಿ ಮಾತನಾಡದಂತೆ ತಡೆಯುತ್ತಿದ್ದನು. ಪುಷ್ಪೋದ್ಭವನು ಮೌನವಾಗಿ ಬಹಳ ಹೊತ್ತು ಕೂಡಲಾರದೆ ಅಲ್ಲಿಂದ ಹೊರಟು ಉದ್ಯಾನವನ್ನು ಸುತ್ತುತ್ತಾ ಬಂದನು. ಆ ಉದ್ಯಾನದ ಶಾಂತ ವಾತಾವರಣವು ಅವನ ಮನಸ್ಸಿನಲ್ಲಿ ಸ್ವಲ್ಪ ಮಟ್ಟಿಗೆ ನೆಮ್ಮದಿಯನ್ನುಂಟು ಮಾಡುತ್ತಿತ್ತು.

ಬರಬರುತ್ತಾ ಅವನು ಅಲ್ಲೊಂದು ಸರೋವರದ ಬಳಿಗೆ ಬಂದನು. ಆ ಸರೋವರದ ತೀರದಲ್ಲಿ ಮರಳದಿಣ್ಣೆ. ಅದರ ಮೇಲೆ ಒಬ್ಬ ತರುಣಿಯು ಕುಳಿತಿದ್ದಳು. ಅವಳ ಮುಖವು ಎಡಗೈಯಲ್ಲಿ ಬಗ್ಗಿದ್ದಿತು. ನವಯುವ್ವನ ದಲ್ಲೂ ಆ ಚಂದಿರನಂತಿದ್ದ ಮುಖದಲ್ಲಿ ನಗೆಯ ಬಗೆಗ ಅವಕಾಶವಿರಲಿಲ್ಲ. ಆ ತರುಣಿಯು ಮಹಾ ಸಂಕಟಕ್ಕೊಳಗಾಗಿದ್ದಂತೆಯೂ, ಅದರ ಪರಿಹಾರಕ್ಕೆ ಉಪಾಯವನ್ನು ಯೋಚಿಸುತ್ತಿದ್ದಂತೆಯೂ ಅವಳ ಮುಖಭಾವದಿಂದ ಗ್ರಹಿಸ

ಬಹುದಾಗಿತ್ತು. ಪುಷ್ಪೋದ್ಭವನು ಸಮೀಪಿಸಿ ದೀನಳಾದ ಆಕೆಯನ್ನು ಯಾರೆಂದು ನೋಡಿದನು. ಅವಳು ವರ್ತಕರ ಬೀದಿಯಲ್ಲಿ ಓಡಾಡುತ್ತಿದ್ದುದ ರಿಂದ ಪರಿಚಿತನಾದ ಒಬ್ಬ ವರ್ತಕನ ಮಗಳೆಂದು ತಿಳಿಯದೆ ಹೋಗಲಿಲ್ಲ. ವರ್ತಕರ ಮನೆಯ ಲಕ್ಷ್ಮಿಯೇ ವಿಗ್ರಹಧರಿಸಿ ಬಂದಿದ್ದಂತೆ ಅವಳ ರೂಪು ಕಂಗೊಳಿಸುತ್ತಿತ್ತು. ಅವಳ ಸೌಂದರ್ಯದಿಂದ ಅವನ ಧೈರ್ಯವು ಸಡಲಿತು. ಅವನ ನೆರಳು ಬಿದ್ದಕೂಡಲೆ ತರುಣಿಯು ಮುಖವನ್ನೆತ್ತಿದಳು. ಅವಳ ದೈನ್ಯ ದೃಷ್ಟಿಯು ಪುಷ್ಪೋದ್ಭವನ ಮೇಲೆ ಬಿದ್ದಿತು. ಸಹಾಯವನ್ನು ಅಪೇಕ್ಷಿಸುವ ಆ ನೋಟವು ಪುಷ್ಪೋದ್ಭವನ ಹೃದಯವನ್ನು ನೇರವಾಗಿ ಮುಟ್ಟಿತು. ಅವನು ಸ್ವಲ್ಪ ಹೊತ್ತು ಅಲ್ಲಿಯೇ ನಿಂತನು. ತನ್ನ ಬೀದಿಯವಳೇ ಆಗಿದ್ದುದ ರಿಂದ ಧೈರ್ಯದಿಂದವನು ಕೇಳ ತೊಡಗಿದನು. "ತರುಣೀ ಮಣಿ! ನಿನ್ನ ಉದ್ವೇಗಕ್ಕೆ ಕಾರಣವೇನು?" ಅವಳ ನೋಟವು ಸುತ್ತ ಹರಿಯಿತು. ಹತ್ತಿರ ದಲ್ಲಿ ಯಾರ ಸುಳಿವೂ ಇರಲಿಲ್ಲ. ನಿರ್ಜನವಾದ ಆ ಪ್ರದೇಶದಲ್ಲಿ ಅವಳಿಗೆ ಸ್ವಲ್ಪ ಧೈರ್ಯಬಂತು. ಭಯವನ್ನೂ ನಾಚಿಕೆಯನ್ನೂ ದೂರಮಾಡಿ ಅವಳು ಮೆಲ್ಲನೆ ತನ್ನ ವೃತ್ತಾಂತವನ್ನು ತಿಳಿಸಿದಳು. "ಸೌಮ್ಯ, ಮಾಲವರಾಜ ನಿಂದ ಮಾನಸಾರನು ಮುದುಕನಾದ್ದರಿಂದ ಮಗನಾದ ದರ್ಪಸಾರನನ್ನೇ ಗದ್ದುಗೆಗೇರಿಸಿದನು. ರಾಜ್ಯಭಾರ ಮಾಡುತ್ತಿದ್ದ ಆ ಕುಮಾರನು ಶತ್ರು ಗಳನ್ನು ಜಯಿಸುವುದಕ್ಕಾಗಿ ತಪಸ್ಸುಮಾಡಲು ಕೈಲಾಸಪರ್ವತಕ್ಕೆ ಹೋಗಿರು ವನು. ಅವನ ಸೋದರತ್ತೆಯ ಮಕ್ಕಳಾದ ಚಂಡವರ್ಮ ದಾರುವರ್ಮರೇ ಈಗ ರಾಜ್ಯವನ್ನು ನೋಡಿಕೊಳ್ಳುತ್ತಿದ್ದಾರೆ. ಅವರಲ್ಲಿ ದಾರುವರ್ಮನು ಪರಸ್ತ್ರೀ ಪರದ್ರವ್ಯಗಳನ್ನು ಅಪಹರಿಸುತ್ತಾ ಜನರಿಗೆ ಹಿಂಸೆಕೊಡುತ್ತಿರುವನು. ಅವನೀಗ ನನ್ನನ್ನು ಬಲಾತ್ಕಾರವಾಗಿ ಅಪಹರಿಸಲು ಯೋಚಿಸುತ್ತಿದ್ದಾನೆ. ನಾನಾದರೋ ವರ್ತಕವರನ ಮಗಳು ಬಾಲಚಂದ್ರಿಕೆ. ನಿನ್ನನ್ನು ಕಂಡಂದಿ ನಿಂದ ನಿನ್ನನ್ನೇ ಮದುವೆಯಾಗಬೇಕೆಂಬ ಅಭಿಲಾಷೆಯಿಂದಿದ್ದೇನೆ. ನಮ್ಮ ಕುಲದಲ್ಲಿಯೇ ಜನಿಸಿರುವ ಐಶ್ವರ್ಯವಂತನಾದ ಮನ್ಮಥನಂತಿರುವ ನಿನ್ನನ್ನು ಬಿಟ್ಟು ಆ ದುಷ್ಟನನ್ನು ಹೇಗೆ ಹೊಂದಲಿ? ಪ್ರಬಲನಾದ ಅವನಿಂದ ತಪ್ಪಿಸಿ ಕೊಳ್ಳುವುದು ಹೇಗೆಂಬುದೇ ನಾನು ಯೋಚಿಸುತ್ತಿರುವ ವಿಷಯ" ಎಂದಳು.

ಇಷ್ಟು ಹೇಳುವುದರಲ್ಲಿ ಅವಳ ಕಣ್ಣುಗಳು ನೀರಿನಿಂದ ತುಂಬಿದುವು. ದುಃಖ ವುಕ್ಕಿಬಂದು ಅವಳು ಬಿಕ್ಕಿಬಿಕ್ಕಿ ಅತ್ತಳು.

ಮೊದಲೇ ಅವಳ ಮೇಲೆ ಮೋಹಗೊಂಡಿದ್ದ ಪುಷ್ಪೋದ್ಭವನ ಮನಸ್ಸು ಕರಗಿತು. ಅವನು ಸ್ವಲ್ಪ ಹೊತ್ತು ಆಲೋಚಿಸಿ "ನಯನ ಚಂದ್ರಿಕೆ, ನಿಮ್ಮ ಬಂಧುಗಳಿಂದ ಹೀಗೊಂದು ವಾರ್ತೆಯನ್ನು ಹಬ್ಬಿಸು. 'ಸಿದ್ಧ ಪುರುಷನು ಹೇಳಿರುವಂತೆ ಬಾಲಚಂದ್ರಿಕೆಯ ಮೈಮೇಲೆ ಯಕ್ಷನೊಬ್ಬ ನಿದ್ದಾನೆ. ಸುಂದರಿಯಾದ ಅವಳನ್ನು ಮದುವೆಯಾಗಬೇಕೆಂಬುವನು ಏಕಾಂತದಲ್ಲಿ ಏಕ ಸಖೀ ಸಮೇತಳಾದ ಬಾಲಚಂದ್ರಿಕೆಯನ್ನು ಮಾತನಾಡಿಸಿ ಸುಖವಾಗಿ ಈಚೆಗೆ ಬರಬೇಕು. ಅಂತಹವನಿಗೆ ಮಾತ್ರ ಬಾಲಚಂದ್ರಿಕೆಯು ದೊರೆಯುವಳು" ಎಂದು. ಇದನ್ನು ಕೇಳಿ ಭಯದಿಂದ ದಾರುವರ್ಮನು ಸುಮ್ಮನಿದ್ದರೂ ಸರಿ. ಇಲ್ಲ ಗರ್ವದಿಂದ ಮುಂದುವರಿದರೆ ತಕ್ಕ ಶಾಂತಿಯನ್ನು ಹೊಂದುವನು." ಎಂದು ಉಪಾಯವನ್ನು ಹೇಳಿ ಅವಳನ್ನು ಸಮಾಧಾನ ಪಡಿಸಿ ಬಂಧುಪಾಲನ ಬಳಿಗೆ ಬಂದನು. ಬಂಧುಪಾಲನೂ ಇವನ ಬರವನ್ನೇ ಹಾರೈಸುತ್ತಿದ್ದನು. ಆ ಮರದ ಮೇಲೆ ಕುಳಿತಿದ್ದ ಹಕ್ಕಿಗಳ ಭಾಷೆಯಿಂದ ಅವನು ತಿಳಿದಿದ್ದುದನ್ನು ಮಿತ್ರನಿಗೆ ತಿಳಿಸಬೇಕೆಂಬ ತವಕದಿಂದಿದ್ದನು. ಪುಷ್ಪೋದ್ಭವನನು ಬಂದಕೂಡಲ ಅವನು "ಮಿತ್ರ, ಇಂದಿಗೆ ಮೂವತ್ತು ದಿನ ಗಳಲ್ಲಿ ನೀನು ನಿನ್ನ ಪ್ರಾಣಸ್ನೇಹಿತನಾದ ರಾಜಪುತ್ರನನ್ನು ಕಾಣುವೆ" ಎಂದು ಹೇಳಿದನು. ಇಬ್ಬರೂ ಮಾತನಾಡಿಕೊಂಡು ಮನೆಯ ಕಡೆಗೆ ಹೊರಟರು.

೪

ದರ್ಪಸಾರನು ತಪಸ್ಸಿಗೆ ಹೋದಂದಿನಿಂದ ಚಂಡವರ್ಮನೇ ರಾಜ್ಯ ವನ್ನು ನೋಡಿಕೊಳ್ಳುತ್ತಿದ್ದನು. ಅವಂತೀ ನಗರದ ಜನರು ಚಂಡವರ್ಮ ನನ್ನು ಚಂಡಶಾಸನನೆಂದು ಚೆನ್ನಾಗಿ ತಿಳಿದಿದ್ದರು. ಆದರೂ ಅವನ ಶಾಸನಕ್ಕೆ ಒಳಪಡದಿದ್ದವನೆಂದರೆ ದಾರುವರ್ಮನು. ತಮ್ಮನೆಂಬ ಅಭಿಮಾನದಿಂದಲೋ ಏನೋ ಚಂಡವರ್ಮನು ದಾರುವರ್ಮನನ್ನು ಸ್ವೇಚ್ಛೆಯಾಗಿರಲು ಬಿಟ್ಟಿದ್ದನು.

ಮೊದಲೇ ಕ್ರೂರಿಯಾದ ದಾರುವರ್ಮನು ಅಣ್ಣನ ಆಧಿಪತ್ಯದಲ್ಲಿ ಮತ್ತಷ್ಟು ಕ್ರೂರಿಯಾದನು. ಮಾನಸಾರನ ಹಿತದ ನುಡಿಗಳಾಗಲೀ ಚಂಡವರ್ಮನ ಹೆದರಿಸುವ ಮಾತುಗಳಾಗಲೀ ಅವನನ್ನು ಒಳ್ಳೆಯದಾರಿಗೆ ತರಲಿಲ್ಲ. ಪ್ರತಿ ದಿನವೂ ಒಂದಲ್ಲೊಂದು ದೂರು ಅವನ ಮೇಲೆ ಬರುತ್ತಲೇ ಇತ್ತು. ಯಾವುದಕ್ಕೂ ಅವನಿಗೆ ಶಿಕ್ಷೆಯಾಗುತ್ತಿರಲಿಲ್ಲ. ಇದರಿಂದ ಅವನಿಗೆ ಧೈರ್ಯ ಹೆಚ್ಚಿ ಅವನ ದುಷ್ಕರ್ಮಕ್ಕೆ ತಡೆಯಿಲ್ಲವಾಯಿತು.

ವರ್ತಕರ ಬೀದಿಗೇ ಅಲಂಕಾರಳಾಗಿದ್ದ ಬಾಲಚಂದ್ರಿಕೆಯ ಮೇಲೂ ಅವನ ದೃಷ್ಟಿ ಬಿತ್ತು. ಯಾವ ರೀತಿಯಿಂದಲಾದರೂ ಅವಳನ್ನು ಮದವೆಯಾಗಬೇಕೆಂಬ ದುರಾಶೆಯು ಅವನನ್ನಾವರಿಸಿತು. ಅವನ ಬಯಕೆಯು ಬೆಳೆದಂತೆಲ್ಲಾ ಊರಿನಲ್ಲಿಯೂ ಅವಳ ಮೇಲಿದ್ದ ಯಕ್ಷನ ಪ್ರಭಾವವು ಹಬ್ಬುತ್ತ ಬಂತು. ಬಾಲಚಂದ್ರಿಕೆಯ ಬಂಧು ಜನರು ಸೇರಿದ ಸ್ಥಳಗಳಲ್ಲೆಲ್ಲ ಇದೇ ಮುಖ್ಯ ವಿಷಯವಾಗಿ ಪರಿಣಮಿಸಿತ್ತು. ದಾರುವರ್ಮನು ಗಾಢವಾಗಿ ಅವಳಲ್ಲಿ ಅನುರಕ್ತನಾಗಿದ್ದುದರಿಂದ ಅವಳ ಬಂಧು ಜನರೊಂದಿಗೆ ಮದುವೆಯ ಪ್ರಸ್ತಾಪ ಮಾಡಿದನು. ಅವರು ಮೊದಲೇ ಸಂಕೇತವಾಗಿದ್ದಂತೆ " ಅಮಾತ್ಯ ಬಂಧುವೇ, ನೀನು ಬಾಲಚಂದ್ರಿಕೆಯನ್ನು ಮದುವೆಯಾಗುವುದು ನಮಗೂ ಇಷ್ಟವೇಯೆ. ಆದರೂ ಬಾಲಚಂದ್ರಿಕೆಯ ಮೈಮೇಲಿರುವ ಯಕ್ಷನು ಯಾರನ್ನೂ ಜೀವಸಹಿತವಾಗಿ ಬಿಡುವುದಿಲ್ಲ. ಇದನ್ನು ಚಂಡವರ್ಮನು ಅನ್ಯಥಾ ತಿಳಿಯಬಾರದು. ಆದ್ದರಿಂದ ಅದಕ್ಕಾಗಿ ಗೊತ್ತಾದ ದಿನದಲ್ಲಿ ಎಲ್ಲ ಪಟ್ಟಣಿಗರಿಗೂ ತಿಳಿದಂತೆ ಸಖೀ ಸಮೇತಳಾದ ಬಾಲಚಂದ್ರಿಕೆಯನ್ನು ನಿನ್ನ ಮನೆಗೇ ಕರೆತರುವೆವು. ನೀನು ಅವಳೊಂದಿಗೆ ಏಕಾಂತದಲ್ಲಿ ವಿಹರಿಸಿ ಬದುಕಿ ಬಂದದ್ದೇ ಆದರೆ ನಿನ್ನನ್ನೇ ಬಾಲಚಂದ್ರಿಕೆಯು ಮದುವೆಯಾಗುವಳು." ಎಂದು ಹೇಳಿದರು. ಅಹಂಕಾರಿಯಾದ ದಾರುವರ್ಮನು ಹಾಗೆಯೇ ಆಗಲೆಂದು ಒಪ್ಪಿದನು.

ಅಂದು ದಾರುವರ್ಮನ ಕುತೂಹಲಕ್ಕೆ ಎಲ್ಲೆಯಿರಲಿಲ್ಲ. ತನ್ನ ಮನೋರಮೆಯಾದ ಬಾಲಚಂದ್ರಿಕೆಯನ್ನು ಅವನು ಸೇರಲು ತವಕಪಡುತ್ತಿದ್ದನು. ಇವನು ಯಕ್ಷನನ್ನು ಗೆದ್ದು ಬರುವನೋ ಇಲ್ಲವೋ ನೋಡಬೇಕೆಂಬ ಕುತೂಹಲದಿಂದ ಪಟ್ಟಣದ ಜನರು ದಾರುವರ್ಮನ ಮನೆಯ ಬಳಿ ಕಿಕ್ಕಿರಿದು

ನೆರೆದಿದ್ದರು. ಕೆಲವರು ಯಕ್ಷನ ಆವೇಶವೇ ಸರಿಯೆಂದು ಹೇಳಿಕೊಳ್ಳುತ್ತಿದ್ದರು. ಮತ್ತೆ ಕೆಲವರು ದಾರುವರ್ಮನಂತಹ ದೃಢಾಂಗನು ಯಾವ ಯಕ್ಷನನ್ನು ಬೇಕಾದರೂ ಹೆದರಿಸಿ ಎದುರಿಸಿ ಬದುಕಿ ಬರಬಲ್ಲನೆಂದು ಹೊಗಳುತ್ತಿದ್ದರು. ಇನ್ನು ಕೆಲವರು ದಾರುವರ್ಮನ ಆಯುಸ್ಸು ಇಂದಿಗೆ ತೀರಿರಬೇಕು. ಇಲ್ಲದಿದ್ದರೆ ಇಂತಹ ಸಾಹಸಕ್ಕೆ ಅವನು ಕೈಹಾಕುತ್ತಿರಲಿಲ್ಲ. ಎಂದುಕೊಳ್ಳುತ್ತಿದ್ದರು. ನೆರೆದಿದ್ದ ಎಲ್ಲ ಪಟ್ಟಣಿಗರ ದೃಷ್ಟಿಯೂ ಅಲಂಕೃತನಾಗಿ ಬರುತ್ತಿದ್ದ ದಾರುವರ್ಮನ ಮೇಲೆ ಬಿದ್ದಿದ್ದಿತು. ಕಾಮಮೂಢನಾದ ದಾರುವರ್ಮನು ಕತ್ತಲಿನಲ್ಲಿ ದೀಪಗಳ ನಡುವೆ ಏಕಾಂತ ಮಂದಿರದ ಕಡೆಗೆ ಬರುತ್ತಿದ್ದನು. ಅವನು ತನ್ನ ಕೇಶವನ್ನು ಸಿಂಗರಿಸಿಕೊಂಡು ತಿಲಕವನ್ನಿಟ್ಟುಕೊಂಡಿದ್ದನು. ಚಂದ್ರ ಕಿರಣಗಳಂತೆ ಬೆಳ್ಳಗಿರುವ ಬಟ್ಟೆಗಳನ್ನು ಧರಿಸಿದ್ದನು. ಅಲಂಕೃತನಾದ ತನ್ನನ್ನು ಮನ್ಮಥನೆಂದೇ ಭಾವಿಸಿಕೊಂಡು ತನ್ನ ಅಂಗಾಂಗಗಳನ್ನು ನೋಡಿಕೊಳ್ಳುತ್ತ ಬರುತ್ತಿದ್ದನು. ಅವನಿಗೆ ಸಮೀಪದಲ್ಲಿ ಒದಗಿ ಬರಲಿದ್ದ ಮೃತ್ಯುವಿನ ಪರಿವೆಯಿರಲಿಲ್ಲ. ತಾನೂ ಚಿರಕಾಲ ಬಾಲಚಂದ್ರಿಕೆಯೊಂದಿಗೆ ಸುಖವಾಗಿ ವಿಹರಿಸುವೆನೆಂಬ ಸವಿಗನಸಿನಲ್ಲಿ ಅವನು ಮುಳುಗಿದ್ದನು.

ಇತ್ತ ಬಾಲಚಂದ್ರಿಕೆಯು ಈ ವಿಷಯವನ್ನು ತನ್ನ ಪ್ರಿಯನಾದ ಪುಷ್ಪೋದ್ಭವನಿಗೆ ತಿಳಿಸಿದಳು. ಸಮರ್ಥನಾದ ಪುಷ್ಪೋದ್ಭವನು ಈ ನೆಪದಿಂದ ದಾರುವರ್ಮನನ್ನು ಅಂತಕ ನಗರಿಗೆ ಅತಿಥಿಯನ್ನಾಗಿ ಮಾಡಬೇಕೆಂದು ಯೋಚಿಸಿದನು. ಅದಕ್ಕಾಗಿ ತನ್ನ ದೇಹವನ್ನು ಸ್ತ್ರೀಯರಂತೆ ಅಲಂಕರಿಸಿಕೊಂಡನು. ರತ್ನನೂಪುರವನ್ನು ಕಾಲುಗಳಲ್ಲಿ ಧರಿಸಿದನು. ರನ್ನದ ಒಡ್ಯಾಣವನ್ನು ನಡುವಿನಲ್ಲಿ ಇಟ್ಟನು. ಕೈಯಲ್ಲಿ ರತ್ನಖಚಿತವಾದ ಬಳೆಗಳನ್ನೂ ತೊಟ್ಟನು. ವಜ್ರದೋಲೆಗಳಿಂದ ಕಿವಿಗಳನ್ನು ಅಲಂಕರಿಸಿಕೊಂಡನು. ಕಂಠದಲ್ಲಿ ರತ್ನಹಾರವನ್ನು ಹಾಕಿಕೊಂಡನು. ಕಣ್ಣುಗಳಿಗೆ ಕಪ್ಪನ್ನು ಹಚ್ಚಿ ಹುಬ್ಬುಗಳನ್ನು ತಿದ್ದಿಕೊಂಡನು. ತಾಂಬೂಲದ ಕೆಂಪಿನಿಂದ ಅವನು ತುಟಿಗಳನ್ನು ಕೆಂಪುಮಾಡಿಕೊಂಡನು. ಉತ್ತಮವಾದ ಪೀತಾಂಬರವನ್ನುಟ್ಟು ಮೇಲುದವನ್ನು ಹೊದ್ದನು. ಹಾವಿನಂತೆ ಉದ್ದವಾದ ಜಡೆಯು ಅವನ ಬೆನ್ನಿನಭಾಗದಲ್ಲಿ ಇಳಿಬಿದ್ದಿತ್ತು. ಹೀಗವನು ವೇಷದಿಂದ ಉತ್ತಮ ಸ್ತ್ರೀಯಾದನು. ಹೆಂಗುಸಿನ ವೇಷವು ಅವನಿಗೆ ಚೆನ್ನಾಗಿ ಒಪ್ಪುತ್ತಿತ್ತು.

ದ್ರೌಪದಿಯಿಂದ ಪ್ರೇರಿತನಾದ ಭೀಮಸೇನನು ಕೀಚಕವಧೆಗಾಗಿ ಸೈರಂಧ್ರಿ ವೇಷವನ್ನು ಹಾಕಿದಂತೆ ಪುಷ್ಪೋದ್ಭವನು ಬಾಲಚಂದ್ರಿಕೆಯಿಂದ ಪ್ರೇರಿತನಾಗಿ ದಾರುವರ್ಮನ ವಧೆಗೆಂದು ಈ ವನಿತಾವೇಷವನ್ನು ಧರಿಸಿದನು. ಬಾಲ ಚಂದ್ರಿಕೆಯೂ ರತ್ನದೊಡವೆಗಳಿಂದ ತನ್ನ ಸುಂದರವಾದ ದೇಹವನ್ನು ಅಲಂಕರಿಸಿಕೊಂಡು ಇವನ ಬಳಿಗೆ ಬಂದು ಸೇರಿದಳು. ಇಬ್ಬರೂ ಮನೆ ಯಿಂದ ಹೊರಟು ಏಕಾಂತಗೃಹದ ಬಾಗಿಲಿಗೆ ಬಂದರು. ಕುತೂಹಲಿಗಳಾದ ಪಟ್ಟಣಿಗರ ಗುಂಪು ಇವರಿಬ್ಬರಿಗೂ ಎಡೆಕೊಟ್ಟಿತು.

ಸುಂದರವಾಗಿ ಅಲಂಕೃತವಾಗಿದ್ದ ಏಕಾಂತಗೃಹದಲ್ಲಿ ರತ್ನಖಚಿತವಾದ ಬಂಗಾರದ ಮಂಚವಿದ್ದಿತು. ಅದರಮೇಲೆ ಹಂಸತೂಲಿಕಾ ತಲ್ಪವನ್ನು ಹಾಸಿದ್ದರು. ದೀಪಗಳಿಂದ ಶೋಭಿಸುತ್ತಿದ್ದ ಆ ಕಿರುಮನೆಯಲ್ಲಿ ದಾರು ವರ್ಮನು ರಾಗಾತಿಶಯದಿಂದ ಕಾಯುತ್ತಾ ಕುಳಿತಿದ್ದನು. ಆ ವೇಳೆಗೆ ಸರಿಯಾಗಿ ಬಾಗಿಲುಕಾಯುವವನು ಒಳಗೆಬಂದು ಸಖೀ ಸಮೇತಳಾದ ಬಾಲ ಚಂದ್ರಿಕೆಯು ಬಂದಳೆಂದು ತಿಳಿಸಿದನು. ಕೂಡಲೆ ಅವನು ತನ್ನ ಮನೋ ರಥವು ಸಿದ್ಧಿಯಾಯಿತೆಂದು ಬಗೆದು ಆನಂದದಿಂದ ಎದ್ದು ಬಂದು ಇದಿರು ಗೊಂಡನು. ಗೆಳತಿಯೊಂದಿಗೆ ಬಾಲಚಂದ್ರಿಕೆಯು ಏಕಾಂತ ಗೃಹವನ್ನು ಪ್ರವೇಶಿಸಿದಳು. ಕುತೂಹಲದಿಂದ ಮುಂದೆ ನುಗ್ಗಲು ಬಂದ ಪೌರರನ್ನು ದ್ವಾರಪಾಲಕರು ತಡೆದರು. ದಾರುವರ್ಮನು ರಾಗಾಂಧನಾಗಿ ವಿವೇಕ ಶೂನ್ಯನಾಗಿದ್ದನು. ಬಾಲಚಂದ್ರಿಕೆಯೊಡನೆ ಬಂದಿದ್ದ ಗೆಳತಿಯು ಸ್ತ್ರೀವೇಷದ ಗಂಡನೆಂದು ಅವನು ತಿಳಿಯಲಿಲ್ಲ. ಆ ದುಷ್ಟನು ಬಾಲಚಂದ್ರಿಕೆಗೆ ಬಂಗಾರದ ತೊಡವುಗಳನ್ನೂ ತೆಳ್ಳನೆಯ ವಿಚಿತ್ರ ವಸ್ತ್ರಗಳನ್ನೂ ಮೆಚ್ಚುಕೊಟ್ಟನು. ಕಸ್ತೂರಿಯನ್ನು ಹಾಕಿ ಅರೆದ ಶ್ರೀಗಂಧವನ್ನು ತಂದು ಮುಂದಿಟ್ಟನು. ಪಚ್ಚ ಕರ್ಪೂರದಿಂದ ಕೂಡಿದ ತಾಂಬೂಲವನ್ನು ಮೆಲ್ಲಲು ಕೊಟ್ಟನು. ಮುಡಿಯಲು ಸುವಾಸನೆಯಾದ ಹೂಗಳನ್ನಿತ್ತನು. ಹೀಗೆ ಬಳಕೆಯುಂಟಾದ ಮೇಲೆ ಸ್ವಲ್ಪ ಹೊತ್ತು ಪರಿಹಾಸದ ಮಾತುಗಳನ್ನಾಡುತ್ತ ಕುಳಿತನು. ಈಯೆಲ್ಲ ವಿಲಾಸವನ್ನೂ ಸಂಗಡಿಗನಾಗಿ ಬಂದಿದ್ದ ಸ್ತ್ರೀವೇಷದ ಪುಷ್ಪೋದ್ಭವನು ನೋಡುತ್ತ ಸಹಿಸದಾದನು. ಅವನ ಭುಜಗಳು ಸಮಯವನ್ನು ಕಾಯುತ್ತ

ಕುಣಿಯುತ್ತಿದ್ದುವು. ಹೊರಗೆ ನೆರೆದಿದ್ದ ಜನರು ಏನಾಗುವುದೋ ಎಂದು ಇಮ್ಮಡಿಯಾದ ಕುತೂಹಲದಿಂದ ಕಾಯುತ್ತ ಹೊರಗೆ ನಿಂತಿದ್ದರು.

ಇನ್ನು ಹೆಚ್ಚು ಹೊತ್ತು ಪುಷ್ಪೋದ್ಭವನಿಗೆ ತಡೆಯಲಾಗಲಿಲ್ಲ. ಅವನು ಇದ್ದಕ್ಕಿದ್ದ ಹಾಗೇ ಕೆರಳಿ ಮಂಚದ ಮೇಲೆ ಮೆತ್ತನೆಯ ಹಾಸಿನಲ್ಲಿ ಕುಳಿತಿದ್ದ ದಾರುವರ್ಮನನ್ನು ಎಳೆದು ಕೆಳಕ್ಕುರುಳಿಸಿದನು. ಇಬ್ಬರಿಗೂ ಮುಷ್ಟಿಮುಷ್ಟಿ ಜಗಳವಾಯಿತು. ಇದನ್ನು ನೋಡುತ್ತಿದ್ದ ಬಾಲಚಂದ್ರಿಕೆಯ ಮೈ ಭಯ ದಿಂದ ನಡುಗಲಾರಂಭಿಸಿತು. ಮೈನವಿರೆದ್ದಿತು. ಕ್ಷಣಕಾಲ ಯಾರು ಗೆಲ್ಲುವ ರೆಂದು ತಿಳಿಯುವುದು ಅಸಾಧ್ಯವಾಗಿತ್ತು. ಈ ಸಾಹಸಕ್ಕೆ ತನ್ನ ಪ್ರಿಯನೆಲ್ಲಿ ತುತ್ತಾಗುವನೋ ಎಂದವಳು ಶಂಕಿಸುತ್ತಿದ್ದಳು. ಅವಳ ಭೀತಿಗೆ ತಕ್ಕಂತೆ ಒಂದು ಸಲ ಪುಷ್ಪೋದ್ಭವನು ದಾರುವರ್ಮನ ಮುಷ್ಟಿಯ ಪೆಟ್ಟನ್ನು ತಡೆಯ ಲಾರದೆ ಸ್ವಲ್ಪ ಹೊತು ನಿಶ್ಚೇಷ್ಟನಾಗಿದ್ದನು. ಕೂಡಲೇ ಚೇತರಿಸಿಕೊಂಡು ಇಮ್ಮಡಿಯಾದ ಕೋಪದಿಂದ ಆ ದುಷ್ಟನ ಮೇಲೆ ಬಿದ್ದನು. ನೀತಿ ಬಾಹಿರ ನಾದ ಅವನನ್ನು ತನ್ನ ಎರಡು ಮೊಣಕಾಲುಗಳಿಂದಲೂ ನೆಲಕ್ಕೆ ಅದುಮಿ ಕೊಂಡು ಎರಡು ಮುಷ್ಟಿಗಳಿಂದಲೂ ಅವನ ಮರ್ಮಸ್ಥಳಗಳಲ್ಲಿ ಬಲವಾದ ಪೆಟ್ಟುಕೊಟ್ಟನು. ದಾರುವರ್ಮನ ಬಾಯಿಂದಲೂ ಮೂಗಿನಿಂದಲೂ ರಕ್ತ ಸುರಿಯಲಾರಂಭವಾಯಿತು. ಆ ನೀಚನ ಪ್ರತಿಯೊಂದು ಅವಯವವೂ ಶಿಥಿಲವಾಗಿ ಮೇಲಕ್ಕೆ ಏಳಲಾಗದೆ ಅವನು ನೆಲದಲ್ಲಿಯೇ ಹೊರಳಾಡು ತ್ತಿದ್ದನು. ಕೂಗಿಕೊಳ್ಳುವುದಕ್ಕೂ ಅವನಿಗೆ ಸಾಮರ್ಥ್ಯವಿರಲಿಲ್ಲ. ಮೇಲು ಸಿರು ಪ್ರಾರಂಭವಾಗಿ ಅವನ ಅವಸಾನಕಾಲವು ಸಮೀಪಿಸಿದಂತೆ ಕಾಣುತ್ತಿತ್ತು. ಪುಷ್ಪೋದ್ಭವನು ಭಯಗೊಂಡಿದ್ದ ಬಾಲಚಂದ್ರಿಕೆಯನ್ನು ಸಮಾಧಾನಪಡಿಸಿ ದನು. ದ್ವಂದ್ವ ಯುದ್ಧದ ಭರದಲ್ಲಿ ವ್ಯತ್ಯಾಸವಾಗಿದ್ದ ತನ್ನ ಸ್ತ್ರೀವೇಷವನ್ನು ಸರಿಪಡಿಸಿಕೊಂಡು ಬಾಲಚಂದ್ರಿಕೆಯೊಂದಿಗೆ ಏಕಾಂತ ಗೃಹದ ಹೊರಬಾಗಿಲಿಗೆ ಬಂದನು. ಭಯದಿಂದ ನಡುಗುತ್ತಿದ್ದವನಂತೆ ನಟಿಸಿ ಗಟ್ಟಿಯಾಗಿ ಕಿರಚಿ ಕೊಂಡನು. “ಅಯ್ಯೋ! ಬಾಲಚಂದ್ರಿಕೆಯ ಮೈಮೇಲಿರುವ ಯಕ್ಷನು ಅದೆಂತಹ ಘೋರಾಕಾರನು! ಕಾಮುಕನಾದ ದಾರುವರ್ಮನನ್ನು ಸಂಪೂರ್ಣ ವಾಗಿ ಮೂರ್ಛೆಗೊಳಿಸಿರುವನು. ಬಿಡಿಸಿಕೊಳ್ಳುವವರಾರಾದರೂ ಇದ್ದಲ್ಲಿ ಮುಂದಕ್ಕೆ ಬರಬಾರದೇ! ಬಾಲಚಂದ್ರಿಕೆಗಾಸೆಪಟ್ಟು ದುಷ್ಟನಾದ ದಾರು

ವರ್ಮನು ತನ್ನ ಪ್ರಾಣಗಳನ್ನೇ ಕಳೆದುಕೊಂಡನು. ಸಿದ್ಧತಾಪಸನ ಮಾತು ಸುಳ್ಳಲ್ಲ, ಬನ್ನಿ, ಇವನನ್ನು ನೋಡಿ" ಎಂದವನು ಹೆಂಗುಸಿನ ದನಿಯಲ್ಲಿ ಕೂಗಿಕೊಂಡನು. ಅಲ್ಲಿ ನೆರೆದಿದ್ದ ಜನರು ಇದನ್ನು ಕೇಳಿ ಮರುಗಿದರು. ಕೆಲವರು ಕಣ್ಣೀರು ಸುರಿಸುತ್ತಾ ಹಾಹಾಕಾರದಿಂದ ದಿಕ್ಕುಗಳನ್ನೇ ಕಿವುಡು ಮಾಡುತ್ತ ಆ ಮಂದಿರವನ್ನು ಪ್ರವೇಶಿಸಿದರು. "ಮೈಮೇಲಿರುವ ಯಕ್ಷನು ಬಲಿಷ್ಟನೆಂದು ತಿಳಿದೂ ಅವನೇಕೆ ಬಾಲಚಂದ್ರಿಕೆಯನ್ನು ಬಯಸ ಬೇಕಾಗಿತ್ತು ? ತನ್ನ ಸಾವಿಗೆ ತಾನೇ ಕಾರಣನಾದನು. ಆ ದುಷ್ಟನ ಮರಣ ಕ್ಕಾಗಿ ಮರುಗುವುದೇಕೆ?" ಎಂದು ಕೆಲವರು ಆಡಿಕೊಳ್ಳುತ್ತಿದ್ದರು. ಹೀಗೆ ಆಡಿಕೊಳ್ಳುತ್ತಿದ್ದ ಜನರ ಕೋಲಾಹಲದ ನಡುವೆ ಬಾಲಚಂದ್ರಿಕೆಯು ಸ್ತ್ರೀ ರೂಪದ ಗೆಳತಿಯೊಡನೆ ಮನೆಗೆ ಹೊರಟುಹೋದಳು. ಭೀಮನು ಕೊಂದ ಕೀಚಕನನ್ನು ಯಕ್ಷನೇ ವಧಿಸಿದನೆಂದು ತಿಳಿದಂತೆ ಪುಷ್ಪೋದ್ಭವನು ಕೊಂದ ದಾರುವರ್ಮನನ್ನು ಯಕ್ಷನು ಕೊಂದನೆಂದೇ ಜನರು ತಿಳಿದರು.

ಕೆಲವು ದಿನಗಳು ಕಳೆದುವು. ಜನರ ಮನಸ್ಸಿನಲ್ಲಿ ಈ ಭಯಂಕರ ದೃಶ್ಯವು ಅಳಿಸಿ ಹೋಗುತ್ತ ಬಂತು. ಸಿದ್ಧತಾಪಸನ ಮಾತಿನಂತೆ ಪುಷ್ಪೋ ದ್ಭವನು ಸಂಗಾತಿಸಹಿತಳಾದ ಬಾಲಚಂದ್ರಿಕೆಯೊಡನೆ ಏಕಾಂತಗೃಹದಲ್ಲಿ ಮಾತನಾಡಿ ಬದುಕಿ ಬಂದನೆಂದು ಊರಿನಲ್ಲೆಲ್ಲ ವಾರ್ತೆಯು ಹಬ್ಬಿತು. ಬಾಲಚಂದ್ರಿಕೆಯ ತಂದೆತಾಯಿಗಳು ಐಶ್ವರ್ಯವಂತನೂ ಸುಂದರನೂ ಆದ ಪುಷ್ಪೋದ್ಭವನಿಗೆ ಮಗಳನ್ನು ಕೊಡಲು ಒಪ್ಪಿದರು. ಒಂದು ಶುಭದಿನ ಶುಭಮುಹೂರ್ತದಲ್ಲಿ ತಕ್ಕ ವೈಭವದಿಂದ ವಿವಾಹ ಮಹೋತ್ಸವವು ನೆರವೇರಿತು.

ಬಂಧುಪಾಲನು ಹೇಳಿದ್ದ ಶಕುನದ ಅವಧಿಯು ಸಮಾಪಿಸಿತು. ಅಂದು ಪುಷ್ಪೋದ್ಭವನು ಗೆಳೆಯನಾದ ರಾಜಕುಮಾರನನ್ನು ಕಾಣುವೆನೋ ಇಲ್ಲವೋ ಎಂದು ಚಿಂತಿಸುತ್ತ ಅವಂತೀ ನಗರದ ಹೊರಭಾಗದಲ್ಲಿ ಸಂಚರಿಸುತ್ತಿದ್ದನು. ಮಹಾ ಕಾಳೇಶ್ವರನ ಉತ್ಸವಕ್ಕೆಂದು ಜನರು ತಂಡತಂಡವಾಗಿ ಬರುತ್ತಿದ್ದರು. ದೂರದಲ್ಲಿ ಸೋಮದತ್ತ ದಂಪತಿಗಳಿಂದ ಕೂಡಿ ರಾಜವಾಹನನೂ ಉತ್ಸವ ಕ್ಕೆಂದು ಬರುತ್ತಿದ್ದುದನ್ನು ಕಂಡನು. ಅವನ ಸಂತಸಕ್ಕೆ ಪಾರವಿರಲಿಲ್ಲ.

ಶಕುನಶಾಸ್ತ್ರವೂ ಪ್ರಮಾಣವಾದುದೆಂದು ಮನಮಾರೆ ಕೊಂಡಾಡಿದನು. ಅತ್ಯಾದರದಿಂದ ಸ್ನೇಹಿತನ ಬಳಿಗೆ ಬಂದನು.

ಬಹುಕಾಲ ಅಗಲಿದ್ದ ಅವರು ಮತ್ತೆ ಸೇರಿ ಪರಸ್ಪರ ಅಪ್ಪಿಕೊಂಡು ಸಂತೋಷಪಟ್ಟರು. ನಿಷ್ಕಲ್ಮಷವಾದ ಸ್ನೇಹವಿದ್ದರೆ ಅಗಲಿದ ಮಿತ್ರರು ಎಂದಾದರೂ ಸೇರುವರಲ್ಲವೇ! ರಾಜವಾಹನನು ಸೋಮದತ್ತನನ್ನು ಬೀಳ್ಕೊಟ್ಟು ಪುಷ್ಪೋದ್ಭವನನ್ನು ಅನುಸರಿಸಿ ಅವಂತೀ ನಗರವನ್ನು ಪ್ರವೇಶಿಸಿದನು. ಪುಷ್ಪೋದ್ಭವನೂ ತನ್ನ ಬಂಧುಗಳಿಗೆ ರಾಜಪುತ್ರನ ಪರಿಚಯವನ್ನು ಮಾಡಿಕೊಟ್ಟು ಯಾರಿಗೂ ತಿಳಿಯದಂತೆ ಬ್ರಾಹ್ಮಣನೆಂದು ನಗರದಲ್ಲಿ ವಾರ್ತೆ ಹಬ್ಬಿಸಿದನು.

ಉಚಿತಸತ್ಕಾರದಿಂದ ರಾಜಪುತ್ರನನ್ನು ತನ್ನ ಮನೆಯಲ್ಲಿಯೇ ಅತಿಥಿಯನ್ನಾಗಿ ಇರಿಸಿಕೊಂಡನು. ಹೀಗೆ ಬಹುಕಾಲದಮೇಲೆ ಮತ್ತೆ ಒಟ್ಟುಗೂಡಿದ ಮಿತ್ರರಿಬ್ಬರೂ ಸಂತೋಷದಿಂದಿದ್ದರು.

# ಸೋಮದತ್ತ

## ೧

ಮಗಧದೇಶದ ದೊರೆಯಾದ ರಾಜಹಂಸನ ಮಂತ್ರಿಗಳಲ್ಲಿ ಸಿತವರ್ಮನೇ ತನ್ನ ಗುಣ, ಸಾಮರ್ಥ್ಯ, ವಿದ್ಯೆಗಳಿಂದ ಮುಖ್ಯಮಂತ್ರಿಯೆನ್ನಿಸಿ ಕೊಂಡಿದ್ದನು. ಅವನ ಮಕ್ಕಳಲ್ಲಿ ಕಿರಿಯವನೇ ಸತ್ಯವರ್ಮ. ಚಿಕ್ಕಂದಿ ನಿಂದಲೂ ದೈವಭಕ್ತರಾದ ತಂದೆತಾಯಿಗಳ ಸಮೀಪದಲ್ಲಿ ಬೆಳೆದ ಸತ್ಯವರ್ಮನು ಅತ್ಯಂತ ಧರ್ಮನಿಷ್ಠನಾಗಿ ಸದಾಚಾರ ಸಂಪನ್ನನಾಗಿದ್ದನು. ವೈರಾಗ್ಯ ಶಾಲಿಯಾದ ಅವನಿಗೆ ವಂಶಪರಂಪರೆಯಿಂದ ಬಂದಿದ್ದ ಮಂತ್ರಿಪದವಿಯಲ್ಲೂ ಆಸಕ್ತಿಯಿರಲಿಲ್ಲ. ಅವನ ಅಣ್ಣನಾದ ಸುಮತಿಯೇ ತಂದೆಯನಂತರ ಮಂತ್ರಿ ಯಾಗಿ ರಾಜನ ಮೆಚ್ಚಿಕೆಗೆ ಪಾತ್ರನಾಗಿದ್ದನು. ಸತ್ಯವರ್ಮನು ಬಹುಕಾಲ ಮದುವೆಯಾಗಲಿಲ್ಲ. ಅವನು ಆತ್ಮಜ್ಞಾನವನ್ನು ಸಂಪಾದಿಸಿ ಮೋಕ್ಷಕ್ಕೆ ಹಾತೊರೆಯುತ್ತಿದ್ದನು. ಸಂಸಾರವು ಅಸಾರವೆಂದು ಅವನು ಮನಗಂಡಿದ್ದನು. ಆದ್ದರಿಂದ ಅಣ್ಣನ ಮನೆಯಲ್ಲಿ ಕೂಡ ವಾಸಿಸದೆ ತೀರ್ಥಯಾತ್ರೆಗೆಂದು ಹೊರಟನು. ಮಾರ್ಗದಲ್ಲಿ ಸಿಕ್ಕಿದ ಪುಣ್ಯತೀರ್ಥಗಳಲ್ಲಿಯೂ ಪವಿತ್ರ ನದಿ ಗಳಲ್ಲಿಯೂ ಮಿಂದು ಆ ಕ್ಷೇತ್ರಾಧಿಪತಿಯಾದ ದೇವರಿಗೆ ಬಲವಂದು ಮುಂದೆ ಸಾಗುತ್ತಿದ್ದನು. ಹೀಗೆ ಅನೇಕ ತೀರ್ಥ ಕ್ಷೇತ್ರಗಳನ್ನು ನೋಡಿಕೊಂಡು ಕಾವೇರೀ ನದಿಯ ತೀರಕ್ಕೆ ಬಂದನು.

ಕಾವೇರೀ ನದಿಯು ದಕ್ಷಿಣಾಪಥದಲ್ಲೆಲ್ಲಾ ಬಹು ಪ್ರಸಿದ್ಧವಾದ ಪುಣ್ಯ ನದಿ. ಅದರ ಮೂಲಸ್ಥಾನದಿಂದ ಹಿಡಿದು ಸಮುದ್ರ ಸಂಗಮದವರೆಗೂ ಉದ್ದಕ್ಕೂ ಕ್ಷೇತ್ರಗಳೂ, ಪವಿತ್ರ ದೇವಸ್ಥಾನಗಳೂ, ಸದಾಚಾರಶೀಲರಾದ ಬ್ರಾಹ್ಮಣರು ವಾಸಿಸುವ ಸಾವಿರಾರು ಅಗ್ರಹಾರಗಳೂ ಇದ್ದುವು. ಕಾವೇರೀ ನದಿಯ ಮೇಲೆ ಬೀಸಿದ ಗಾಳಿ ಬೀಸುವ ಸ್ಥಳದಲ್ಲಿ ವಾಸಿಸುವ ಜನರು ಮುಕ್ತ ರಾಗುವರೆಂದು ಪುರಾಣಗಳು ಸಾರುತ್ತಿದ್ದುದು ಸತ್ಯವರ್ಮನಿಗೆ ತಿಳಿಯದೆ

ಇರಲಿಲ್ಲ. ಆದ್ದರಿಂದ ಅವನು ಉತ್ಸಾಹದಿಂದ ಕಾವೇರೀ ತೀರದಲ್ಲಿ ಸಂಚರಿಸುತ್ತ ಬಂದನು. ದಿನಕ್ಕೊಂದು ಅಗ್ರಹಾರದಂತೆ ಪ್ರವಾಸಮಾಡುತ್ತ ಉತ್ತಮ ಬ್ರಾಹ್ಮಣರಿದ್ದ ಅಗ್ರಹಾರವೊಂದಕ್ಕೆ ಬಂದನು.

ಆಚಾರ ವ್ಯವಹಾರಕ್ಕೆ ಅನುಕೂಲವಾಗಿದ್ದ ಆ ಸಣ್ಣ ಅಗ್ರಹಾರವು ಅವನ ಮನಸ್ಸನ್ನು ಸೆಳೆಯಿತು. ಕೆಲವು ದಿನಗಳ ಮಟ್ಟಿಗಾದರೂ ಅಲ್ಲಿಯೇ ವಾಸಿಸಬೇಕೆಂದವನು ಬಯಸಿದನು. ತಕ್ಕಂತೆ ಒಬ್ಬ ಸದಾಚಾರಿಯಾದ ವಿಪ್ರನ ಮನೆಯಲ್ಲಿ ವಾಸಿಸ ತೊಡಗಿದನು. ಆ ಗೃಹಸ್ಥನ ಅನುಕೂಲ ಸಂಸಾರವನ್ನು ನೋಡಿದ ಅವನಿಗೆ ಸಂಸಾರವು ಅಸಾರವೆಂಬ ಶಾಸ್ತ್ರದ ಮಾತು ಸುಳ್ಳೆಂಬಂತೆ ತೋರಿತು. ವಿಧಿಯ ಮಹಿಮೆಯಿಂದ ಅವನ ಮನಸ್ಸಿನಲ್ಲಿ ಮದುವೆಯಾಗಬೇಕೆಂಬ ಆಶೆ ಮೂಡಿತು. ಈ ವಿಷಯವು ಆ ಬ್ರಾಹ್ಮಣನಿಗೆ ತಿಳಿದುಬಂತು. ಆ ಬ್ರಾಹ್ಮಣನು ಸಂತೋಷದಿಂದ ತನ್ನ ಹಿರಿಯ ಮಗಳು ಕಾಳಿಯನ್ನು ಕೊಟ್ಟು ಮದುವೆ ಮಾಡಿದನು. ಕಾಳಿಯು ಪತಿಗೆ ತಕ್ಕ ಸತಿಯಾಗಿ ಕೆಲವು ಕಾಲ ಸಂಸಾರವನ್ನು ಸಾಗಿಸಿದಳು. ಅನೇಕ ವರ್ಷಗಳು ಉರುಳಿದುವು. ಆದರೂ ಅವರೀರ್ವರಿಗೆ ಋಣತ್ರಯದಲ್ಲೊಂದಾದ ಪಿತೃಋಣವನ್ನು ಕಳೆದುಕೊಳ್ಳಲು ಒಬ್ಬ ಸತ್ಪುತ್ರನು ಜನಿಸಲಿಲ್ಲ. ಈ ಬೇಗೆಯು ದಂಪತಿಗಳನ್ನು ನೋಯಿಸಿತು. ಕೊನೆಗೆ ಸತ್ಯವರ್ಮನು ಸಂತಾನಾರ್ಥವಾಗಿ ಕಾಳಿಯ ತಂಗಿಯೂ ಸುಂದರಿಯೂ ಆಗಿದ್ದ ಗೌರಿಯನ್ನು ಮದುವೆಯಾದನು. ಅಕ್ಕ ತಂಗಿಯರು ಸವತಿಯರಾದರೂ ಪರಸ್ಪರ ಪ್ರೀತಿಯಿಂದ ವಾಸಿಸುತ್ತಿದ್ದರು.

ಕೆಲವು ವರ್ಷಗಳಲ್ಲಿಯೇ ಗೌರಿಯು ಬಸಿರಿಯಾದಳು. ಅವಳ ಬಸಿರು ಬೆಳೆದಂತೆಲ್ಲಾ ಕಾಳಿಯ ಮನಸ್ಸಿನಲ್ಲಿ ಅಸೂಯೆ ಬೆಳೆಯಿತು. ಪುತ್ರವತಿಯಾದ ಗೌರಿಯನ್ನು ಪತಿಯು ಹೆಚ್ಚು ಪ್ರೀತಿಸುವನೆಂಬ ಭಾವನೆ ಅವಳಲ್ಲಿ ಬಲಿಯುತ್ತ ಬಂತು. ಆದರೆ ಅವಳೇನು ತಾನೇ ಮಾಡಿಯಾಳು ? ನವಮಾಸ ತುಂಬಿ ಹತ್ತನೆಯ ತಿಂಗಳಲ್ಲಿ ಗೌರಿಯು ಸರ್ವಲಕ್ಷಣೋಪೇತನಾದ ಸರ್ವಾಂಗ ಸುಂದರನಾದ ಮಗನನ್ನು ಹಡೆದಳು. ಕಾಳಿಯ ದುಃಖಕ್ಕೆ ಪಾರವೇ ಇರಲಿಲ್ಲ. ಅಂತಹ ಮಗುವನ್ನು ಹಡೆಯುವ ಭಾಗ್ಯವನ್ನು ತನ್ನ ಹಣೆಯಲ್ಲಿ ವಿಧಿ ಬರೆಯಲಿಲ್ಲವಲ್ಲಾ ಎಂದು ಅವನನ್ನು ಹಳಿದಳು. ಕಾಳಿಯ ಅಸೂಯೆಯೊಂದಿಗೆ ಗೌರಿಯ ಮಗನು ಬೆಳೆಯುತ್ತಿದ್ದನು.

ಮಗುವನ್ನು ನೋಡಿಕೊಳ್ಳಲು ಒಬ್ಬ ದಾದಿಯನ್ನು ನಿಯಮಿಸಿದ್ದರು. ಮಗುವು ತಾಯಿಯ ಹಂಬಲಿಲ್ಲದೆ ದಾದಿಯ ಬಳಿಯಲ್ಲೇ ಬೆಳೆಯುತ್ತ ಬಂತು. ಕಾಳಿಯ ಅಸೂಯೆ ಹೆಚ್ಚುತ್ತ ಬಂದು ಕೊನೆಗೆ ಅದು ಮಗುವಿನ ಮರಣಕ್ಕೆ ಕಾರಣವಾಯಿತು. ಮೇಲೆ ಮಾತ್ರ ಕಾಳಿಯು ಮಗುವನ್ನು ಹೆಚ್ಚಾಗಿ ಪ್ರೀತಿಸುವಳಂತೆ ನಟಿಸುತ್ತಿದ್ದಳು. ಗೌರಿಗೆ ಸ್ವಲ್ಪವಾದರೂ ಸಂದೇಹಬರಲಿಲ್ಲ. ಅದೂ ಅಲ್ಲದೆ ದಾದಿಯ ಪೋಷಣೆಯಲ್ಲಿ ಇದ್ದುದರಿಂದ ಮಗುವಿಗೆ ಯಾವ ತೊಂದರೆಯೂ ಇಲ್ಲವೆಂದು ಅವಳು ತಿಳಿದಿದ್ದಳು. ಕಾಳಿಯು ಒಂದು ದಿನ ದಾದಿಯನ್ನು ಕರೆದು. ನದೀ ಪ್ರವಾಹ ತುಂಬಿ ಹರಿಯುತ್ತಿದೆಯಂತೆ. ಬಾ, ನೋಡಿಕೊಂಡು ಬರೋಣ" ಎಂದು ಕರೆದಳು. ದಾದಿಯು ಬೇಡವೆನ್ನುವಂತಿರಲಿಲ್ಲ. ಆದರೆ ಅವಳನ್ನು ಎಡಬಿಡದೆ ಹಿಂಬಾಲಿಸುತ್ತಿದ್ದ ಆ ಹುಡುಗನನ್ನು ಎಲ್ಲಿ ಬಿಟ್ಟು ಹೋಗುವುದು? ದಾದಿಯು ಅವನನ್ನು ಮರೆಸಲು ಅದೆಷ್ಟೋ ಉಪಾಯ ಮಾಡಿದಳು. ಆದರೂ ಆ ಬಾಲಕನು ಒಪ್ಪಲಿಲ್ಲ. ಕೊನೆಗೆ ಹುಡುಗನನ್ನು ಎತ್ತಿಕೊಂಡು ದಾದಿಯು ಹೊರಟಳು. ದಾರಿಯಲ್ಲಿ ಇಬ್ಬರೂ ಹಾಸ್ಯದ ಮಾತುಗಳನ್ನಾಡಿಕೊಳ್ಳುತ್ತ ನದಿಯ ದಡಕ್ಕೆ ಬಂದರು. ದಡದಲ್ಲಿ ನಿಂತು ಪ್ರವಾಹದ ಸೊಬಗನ್ನು ನೋಡುತ್ತಿದ್ದರು. ದಡವನ್ನು ಕೊರೆದುಕೊಂಡು ಹೋಗುತ್ತಿದ್ದ ಆ ನದಿಯ ಪ್ರವಾಹದಲ್ಲಿ ಎಷ್ಟೋ ದೊಡ್ಡ ದೊಡ್ಡ ಮರಗಳು ಬೇರುಕಿತ್ತು ಹೊಡೆದುಕೊಂಡು ಬರುತ್ತಿದ್ದುವು. ದಾದಿಯು ಕೊಂಕಳಲ್ಲಿದ್ದ ಮಗುವಿಗೆ ನೀರನ್ನು ತೋರಿಸುತ್ತಾ ವಿವರಿಸುತ್ತಿದ್ದಳು. ಕಾಳಿಯು ಪಕ್ಕದಲ್ಲಿ ನಿಂತಿದ್ದಳು. ಅವಳು ತನ್ನ ಎಡಗೈಯನ್ನು ತೆಗೆದು ದಾದಿಯ ಹೆಗಲ ಮೇಲೆ ಹಾಕಿ "ಹಿಂದಕ್ಕೆ ಸರಿಯೋಣ. ಒಂದುವೇಳೆ ನಾವು ನಿಂತಿರುವ ದಡವು ಕಳಚಿದರೆ ಗತಿ ಏನು?" ಎನ್ನುತ್ತಾ ಹಿಂದಕ್ಕೆ ಎಳೆಯುವಳಂತೆ ನಟಿಸಿ ಮುಂದಕ್ಕೆ ತಳ್ಳಿಬಿಟ್ಟಳು. ದಾದಿಯು ಹಾ ಎನ್ನುವಷ್ಟರಲ್ಲಿ ಹುಡುಗನೂ ಅವಳೂ ನೀರಿನಲ್ಲಿ ಬಿದ್ದಿದ್ದರು. ಈಜಾಡಲು ಬರುತ್ತಿದ್ದ ಅವಳು ಒಂದು ಕೈಯಿಂದ ಮಗುವನ್ನು ಎತ್ತಿಹಿಡಿದಳು. ಮತ್ತೊಂದು ಕೈಯಿಂದ ಈಜಿಕೊಂಡು ಹೋಗುತ್ತಿದ್ದಳು. ಪ್ರವಾಹದಲ್ಲಿ ಸಿಕ್ಕಿದ ಮರವೊಂದರ ಎತ್ತರವಾದ ಕೊಂಬೆಯಲ್ಲಿ ಹುಡುಗನನ್ನು ಕೂಡಿಸಿ ಅದನ್ನು ಹಿಡಿದು ಪ್ರವಾಹದೊಂದಿಗೆ ಮುಂದಕ್ಕೆ ಸಾಗಿದಳು.

ಹೊಳೆಯು ಅತಿ ರಭಸದಲ್ಲಿ ಇದ್ದುದರಿಂದ ಅವಳು ದಡಕ್ಕೆ ಈಜಿ ಕೊಂಡು ಹೋಗಲಾಗಲಿಲ್ಲ. ಗಾಬರಿಯಿಂದ ಅಳುತ್ತಿದ್ದ ಆ ಬಾಲನನ್ನು ನೋಡಿ ಅವಳಿಗೆ ಮರುಕ. ತಾನು ನೀರು ಪಾಲಾದರೂ ಚಿಂತೆಯಿಲ್ಲ. ಮಗುವು ಉಳಿದರೆ ಸಾಕೆಂದು ಅವಳು ಬಗೆಯುತ್ತಿದ್ದಳು. ಹೀಗೆ ಬಹುದೂರ ಬಂದಿರಬಹುದು. ಆ ವೇಳೆಗೆ ಹೊಡೆದುಕೊಂಡು ಬರುತ್ತಿದ್ದ ಆ ಮರವು ಅಡ್ಡವಾಗಿ ನೆಲ ಸಿಕ್ಕಿದ್ದರಿಂದ ಅಲ್ಲಿಯೇ ನಿಂತಿತು. "ದೇವರ ದಯೆಯಿಂದ ತೀರಕ್ಕೆ ಬಂದೆನು. ಹೇಗಾದರೂ ಸಮೀಪದ ಊರಿನಲ್ಲಿ ವಾಸಿಸುತ್ತಾ ಹುಡುಗನನ್ನು ಸಾಕುವೆನು" ಎಂದುಕೊಳ್ಳುವಷ್ಟರಲ್ಲಿ ಆ ಗಿಡದ ಕೊಂಬೆ ಯೊಂದಕ್ಕೆ ಸುತ್ತಿಕೊಂಡಿದ್ದ ಕರಿನಾಗರ ಹಾವು ದಾದಿಯನ್ನು ಕಚ್ಚಿ ಮುಂದಕ್ಕೆ ಹರಿದುಹೋಯಿತು. ಬೇಗನೆ ಮಗುವನ್ನು ಎತ್ತಿ ತೊಡೆಯ ಮೇಲಿಟ್ಟುಕೊಂಡು ಅಳುತ್ತಾ ಪಕ್ಕದ ಗಿಡಕ್ಕೆ ಒರಗಿಕೊಂಡು ಕುಳಿತಳು.

ಈ ವಿಷಮ ಸನ್ನಿವೇಶವನ್ನು ನೋಡಲಾರದವನಂತೆ ಸೂರ್ಯದೇವನು ಅಸ್ತಾಚಲವನ್ನು ಸೇರಿದನು. ಆಗ ಸಂಧ್ಯಾವಂದನೆಗಾಗಿ ಅಲ್ಲಿಗೊಬ್ಬ ಋಷಿ ಕುಮಾರನು ಬಂದನು. ಬರುತ್ತಿದ್ದಂತೆಯೇ ಅವನ ಕಣ್ಣುಗಳು ಅಳುತ್ತಿದ್ದ ಆ ಹೆಂಗುಸಿನ ಕಡೆಗೆ ಸಾಗಿದುವು. ಸಮೀಪಿಸಿ ಅವನು ಕರುಣೆಯಿಂದ 'ಅಮ್ಮಾ! ನಿರ್ಜನವಾದ ಈ ಪ್ರದೇಶದಲ್ಲಿ ನೀನೇಕೆ ಅಳುತ್ತ ಕುಳಿತಿರುವೆ.' ಎಂದನು. ಅದಕ್ಕವಳು 'ಅಪ್ಪಾ! ಇವನು ಸತ್ಯವರ್ಮನ ಮಗನು. ಇನ್ನುಮುಂದೆ ಇವನನ್ನು ಕಾಪಾಡುವ ಭಾರ ನಿನ್ನದು. ನೀನೇ ಇವನ ಪಾಲಿನ ದೇವರು. ಹಾವು ಕಚ್ಚಿದ್ದರಿಂದ ನಾನು ಸಾಯುತ್ತಲಿದ್ದೇನೆ.' ಎಂದಳು. ಆ ವೇಳೆಗೆ ಅವಳ ಮೈಯೆಲ್ಲಾ ಬೆವರಿ ಕಣ್ಣುಗಳು ಕತ್ತಲಿಟ್ಟವು. ವಿಷವು ಶರೀರದಲ್ಲಿ ವ್ಯಾಪಿಸಿ ಅವಳನ್ನು ನಿಶ್ಚೇತನಳನ್ನಾಗಿ ಮಾಡಿತು. ನೆಲಕ್ಕೆ ದೊಪ್ಪನೆ ಬಿದ್ದಳು. ಕೃಪಾಳುವಾದ ಋಷಿಕುಮಾರನು ತನಗೆ ಹಾವಿನ ಮಂತ್ರ ಬಾರದಿದ್ದುದಕ್ಕಾಗಿ ಬಹಳ ನೊಂದುಕೊಂಡು ತಿಳಿದಿದ್ದ ಮೂಲಿಕೆ ಯೊಂದನ್ನು ಹುಡುಕಿಕೊಂಡು ಬರಲು ಹೊರಟನು. ಮೂಲಿಕೆಯನ್ನು ಹುಡುಕಿಕೊಂಡು ಬರುವುದರೊಳಗಾಗಿ ದಾದಿಯ ಪ್ರಾಣಪಕ್ಷಿಯು ಹಾರಿ ಹೋಗಿದ್ದಿತು. ಮೃತ್ಯುವನ್ನು ಯಾರುತಾನೇ ತಪ್ಪಿಸಬಲ್ಲರು? ಆ ಋಷಿ ಕುಮಾರನು ಇತರರ ಸಹಾಯದಿಂದ ಆ ದಾದಿಯುಶವಕ್ಕೆ ಅಗ್ನಿ ಸಂಸ್ಕಾರ

ವನ್ನು ನೆರವೇರಿಸಿ ಅನಾಥನಾದ ಆ ಹುಡುಗನನ್ನು ತಾನು ಇಳಿದುಕೊಂಡಿದ್ದ ಆಶ್ರಮಕ್ಕೆ ಕರೆತಂದನು.

ವಾಮದೇವ ಮಹರ್ಷಿಯ ಶಿಷ್ಯನಾದ ಈ ಋಷಿಕುಮಾರನು ತೀರ್ಥ ಯಾತ್ರೆಮಾಡುತ್ತಾ ಅಲ್ಲಿಗೆ ಬಂದಿದ್ದನು. ಸತ್ಯವರ್ಮನು ರಾಜಹಂಸನ ಮಂತ್ರಿಯ ಮಗನಿರಬಹುದೆಂದು ಊಹಿಸಿ ಆ ಹುಡುಗನನ್ನು ತನ್ನೊಡನೆ ಕರೆದುಕೊಂಡು ಕ್ಷೇತ್ರಗಳನ್ನು ಸಂಚರಿಸಿದನು. ಸುಂದರನಾದ ಆ ಹುಡುಗ ನೊಂದಿಗೆ ಗುರುಗಳ ಆಶ್ರಮಕ್ಕೆ ಹಿಂತಿರುಗಿದನು. ಅಲ್ಲಿ ವಾಸಿಸುತ್ತಿದ್ದ ರಾಜಹಂಸನ ಬಳಿಗೆ ಬಂದು ‘ ಇವನು ಸತ್ಯವರ್ಮನ ಮಗನು. ಇವನನ್ನು ನೋಡಿಕೊಳ್ಳುತ್ತಿದ್ದ ಹೆಂಗುಸು ಹಾವುಕಚ್ಚಿ ಸತ್ತುಹೋದಳು.” ಎಂದನು. ರಾಜನು ಸತ್ಯವರ್ಮನ ವಿಷಯವನ್ನು ತಿಳಿಯದೆ ಖಿನ್ನನಾಗಿ ಸುಮತಿಯನ್ನು ಕರೆದು ನಿನ್ನ ತಮ್ಮನ ಮಗನೆಂದು ಹೇಳಿ ಆ ಹುಡುಗನನ್ನು ಅವನ ವಶಕ್ಕೆ ಕೊಟ್ಟನು. ತಮ್ಮನ ಪಡಿಯಚ್ಚಿನಂತಿದ್ದ ಆ ಹುಡುಗನು ದೊರಕಿದ್ದುದಕ್ಕಾಗಿ ಸಂತೋಷಪಟ್ಟ ಸುಮತಿಯು ಸೋಮದತ್ತನೆಂದು ಹೆಸರಿಟ್ಟು ಪ್ರೀತಿಯಿಂದ ಅವನನ್ನು ಬೆಳೆಸಿದನು. ರಾಜಪುತ್ರನಾದ ರಾಜವಾಹನನೊಂದಿಗೆ ಸೋಮ ದತ್ತನು ಎಲ್ಲ ವಿದ್ಯೆಗಳನ್ನೂ ಕಲಿತು ಅವನೊಡನೆ ವಿಜಯಯಾತ್ರೆಗೆ ಹೊರಟನು.

೨

ವಿಂಧ್ಯಾರಣ್ಯದಲ್ಲಿ ಮಾತಂಗನಾಶ್ರಮದಬಳಿ ಎಲ್ಲರೂ ಬೀಡುಬಿಟ್ಟರು. ಅಂದಿನ ರಾತ್ರಿ ಮಲಗಿದವರು ಬೆಳಗ್ಗೆ ರಾಜಪುತ್ರನನ್ನು ಎಲ್ಲಿಯೂ ಕಾಣಲಿಲ್ಲ. ಇತರ ಕುಮಾರರಂತೆ ಸೋಮದತ್ತನೂ ಗೆಳೆಯನನ್ನು ಹುಡುಕಿಕೊಂಡು ಹೊರಟನು. ಅನೇಕ ಗಾವುದಗಳು ನಡೆದನು. ಬರಬರುತ್ತಾ ಒಂದು ದೊಡ್ಡಕಾಡಿಗೆ ಬಂದನು. ಮಾರ್ಗಾಯಾಸದಿಂದ ಅವನಿಗೆ ನೀರಡಿಕೆ ಬಹಳ ವಾಯಿತು. ದಾಹಶಾಂತಿಗಾಗಿ ನೀರನ್ನು ಹುಡುಕಿಕೊಂಡು ಹೋದನು. ಸ್ವಲ್ಪದೂರದಲ್ಲಿ ಒಂದು ಸಣ್ಣ ಹೊಳೆಯು ಹರಿಯುತ್ತಿತ್ತು. ಬಳ್ಳಿಗಳಿಂದ

ಆವೃತವಾಗಿ ಹರಿಯುತ್ತಿದ್ದ ನೀರು ಸ್ವಚ್ಛವಾಗಿಯೂ ತಂಪಾಗಿಯೂ ಇದ್ದಿತು. ತೃಪ್ತಿಯಾಗುವಷ್ಟು ನೀರನ್ನು ಕುಡಿದನು.

ದಡದಮೇಲಕ್ಕೆ ಹತ್ತಿ ಬರುವಾಗ ನೆಲದಲ್ಲಿ ಹೊಳೆಯುತ್ತಾ ಬಿದ್ದಿದ್ದ ಒಂದು ಅಪೂರ್ವ ವಸ್ತುವು ಅವನ ನೋಟವನ್ನು ಸೆಳೆಯಿತು. ಅದು ಏನಿರ ಬಹುದೆಂದು ಅವನು ಕುತೂಹಲದಿಂದ ಬಗ್ಗಿನೋಡಿದನು. ಅದು ಒಂದು ದೊಡ್ಡರತ್ನವಾಗಿತ್ತು. ಅಮೂಲ್ಯವಾದ ಆ ರತ್ನವು ಯಾವುದು ಮತ್ತು ಯಾರದೆಂದು ಅವನಿಗೆ ತಿಳಿಯಲಿಲ್ಲ. ಅದರ ಕಾಂತಿಗೆ ಮೋಸಹೋಗಿ ಅದನ್ನು ಬಿಡಲಾರದೆ ಎತ್ತಿಕೊಂಡನು. ಮತ್ತೆ ಗೆಳೆಯನನ್ನು ಹುಡುಕಿ ಕೊಂಡು ಮುಂದುವರೆದನು. ಸೂರ್ಯನ ಬಿಸಿಲಿನ ತಾಪವು ಅತಿಯಾಗಿ ದ್ದಿತು. ಆ ಬಿರುಬಿಸಿಲಲ್ಲಿ ಮುಂದಕ್ಕೆ ಹೋಗಲಾಗಲಿಲ್ಲ. ಎಲ್ಲಿಯಾದರೂ ನೆರಳಿನಲ್ಲಿ ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ಬಳಿಕ ಪ್ರಯಾಣಮಾಡುವುದು ಉಚಿತವೆಂದು ತಿಳಿದು ನೆರಳಿರುವ ಪ್ರದೇಶವನ್ನು ಹುಡುಕಿದನು. ಸಮೀಪ ದಲ್ಲಿಯೇ ಒಂದು ದೇವರಗುಡಿ ಇದ್ದಿತು. ಮಹಾದ್ವಾರದ ಬಳಿ ಒಳಭಾಗದಲ್ಲಿ ಎರಡು ಪಕ್ಕದಲ್ಲೂ ಜಗುಲಿಗಳಿದ್ದುವು. ದಾರಿಹೋಕರು ಅಲ್ಲಿ ತಂಗುವುದಕ್ಕೆ ಯಾರ ಅಡ್ಡಿಯೂ ಇರಲಿಲ್ಲ. ಸೋಮದತ್ತನು ವಿಶ್ರಾಂತಿಗಾಗಿ ಅಲ್ಲಿ ಕುಳಿತನು.

ಆಯಾಸದಿಂದ ಅವನು ಮಲಗಬೇಕೆನ್ನುವಷ್ಟರಲ್ಲಿ ಮುದುಕನೊಬ್ಬನು ಕೆಮ್ಮುವ ಶಬ್ದವು ಕೇಳಿಸಿತು. ಯಾರಿರಬಹುದೆಂದು ಶಬ್ದದಕಡೆಗೆ ನೋಡಿ ದನು. ಅಲ್ಲೊಬ್ಬ ಮುದುಕನಿದ್ದನು. ಅವನಿಗೆ ಸುಮಾರು ಎಪ್ಪತ್ತು ವಯಸ್ಸಿರಬಹುದು. ಮೈಚರ್ಮವು ಸುಕ್ಕುಬಿದ್ದು ಅವನ ಶರೀರದ ಕಾಂತಿ ಯನ್ನು ಕೆಡಿಸಿತ್ತು. ಅವನ ಪಕ್ಕದಲ್ಲಿ ಅವನಷ್ಟೇ ಉದ್ದದ ಒಂದು ಬಿದಿರಿನ ದೊಣ್ಣೆಯು ಅಡ್ಡವಾಗಿ ಬಿದ್ದಿದ್ದಿತು. ಅವನ ಸುತ್ತಲೂ ಆರು ಮಕ್ಕಳು ಆ ಕಲ್ಲು ಹಾಸಿಗೆಯಲ್ಲೇ ಮಲಗಿದ್ದರು. ಅವರು ನಿದ್ರಿಸುತ್ತಿದ್ದರೇ ಅಥವಾ ಹಸಿವೆಯ ಬೇಗೆಯನ್ನು ತಡೆಯಲಾರದೆ ಹಾಗೆ ಮಲಗಿದ್ದರೇ ಎಂಬುದು ಸೋಮದತ್ತನಿಗೆ ತಿಳಿಯಲಿಲ್ಲ. ಆ ಜಗುಲಿಯ ಒಂದು ಮೂಲೆಯಲ್ಲಿ ಒಂದೆರಡು ಮಣ್ಣಿನ ಮಡಕೆಗಳು ಇದ್ದುವು. ಮುದುಕನು ಮತ್ತೊಂದು ಸಲ ದೀರ್ಘವಾಗಿ ಕೆಮ್ಮಿದನು. ಅವನ ನಿರ್ಮಾಂಸವಾದ ಕೆನ್ನೆಗಳ ಮೇಲೆ

ತೇಜಸ್ಸಿಲ್ಲದ ಕಣ್ಣುಗಳಿಂದ ನೀರು ಸಂತತವಾಗಿ ಸುರಿಯುತ್ತಿತ್ತು. ಅವನು ಹೊದ್ದುಕೊಂಡಿದ್ದ ಹರಕು ಹೊದಿಕೆಯ ರಂಧ್ರಗಳಿಂದ ಯಜ್ಞೋಪವೀತವು ಕಾಣುತ್ತಿತ್ತು. ಕಣ್ಣೀರು ನೆಲದಮೇಲೆ ತೊಟ್ಟಿಟ್ಟು ಹಾಸಿದ್ದ ಕಲ್ಲನ್ನು ಒದ್ದೆ ಮಾಡುತ್ತಿತ್ತು. ಆ ಮುದುಕನ ಪರಿಸ್ಥಿತಿಯನ್ನು ಕಂಡು ಸೋಮದತ್ತನ ಮನಸ್ಸಿನಲ್ಲಿ ಕನಿಕರವು ಮೂಡಿತು. ಉದಾಸೀನ ಭಾವದಿಂದಿರಲು ಅವನ ಮನಸ್ಸೊಪ್ಪಲಿಲ್ಲ.

ಆ ಮುದುಕನನ್ನವನು ಕುಶಲಪ್ರಶ್ನೆಮಾಡಿದನು. ಅದಕ್ಕಾ ಮುದುಕನು "ಪುಣ್ಯಾತ್ಮನೇ! ನಾನೊಬ್ಬ ಮಂದಭಾಗ್ಯನಾದ ಬ್ರಾಹ್ಮಣನು. ಇಲ್ಲಿ ಮಲಗಿರುವ ಈ ಮಕ್ಕಳ ತಾಯಿಯು ಸತ್ತು ಅನೇಕ ದಿನಗಳಾದುವು. ಇವರನ್ನು ಕಾಪಾಡುವ ಭಾರವು ನನ್ನದಾಯಿತು. ಮನೆ ಮಠಗಳನ್ನು ಕಳೆದುಕೊಂಡ ನಾನು ಮುದುಕನಾದ್ದರಿಂದ ದುಡಿಯಲಾರದೆ ಭಿಕ್ಷಾವೃತ್ತಿ ಯನ್ನವಲಂಬಿಸಿದೆನು. ಸಮೀಪದಲ್ಲಿರುವ ಕುಗ್ರಾಮದಿಂದ ಭಿಕ್ಷೆ ತಂದು ಈ ಮಕ್ಕಳನ್ನು ಹೊರೆಯುತ್ತಿದ್ದೇನೆ. ಕಳೆದ ಎರಡು ದಿನಗಳಿಂದ ಭಿಕ್ಷೆಯೂ ದೊರಯಲಿಲ್ಲ" ಎಂದು ಕಣ್ಣೀರನ್ನು ಮಿಡಿಯುತ್ತಾ ನುಡಿದನು. ಸೋಮದತ್ತನ ಮನಸ್ಸು ಕರಗಿತು. ಬಡವನಾದ ಆ ಬ್ರಾಹ್ಮಣನಿಗೆ ಏನಾದರೂ ಸಹಾಯ ಮಾಡಬೇಕೆಂಬಾಸೆ. ಆದರೆ ತನ್ನ ಬಳಿಯಲ್ಲಿ ಏನೂ ಇರಲಿಲ್ಲ. ಆಗತಾನೇ ದೊರೆತಿದ್ದ ಉಜ್ಜ್ವಲವಾದ ರತ್ನವೊಂದೇ ಅವನ ಬಳಿಯಲ್ಲಿದ್ದುದು. ಕೊನೆಗೆ ಅವನ್ನೇ ಆ ಬ್ರಾಹ್ಮಣನಿಗೆ ಕೊಟ್ಟು ನಮಸ್ಕಾರ ಮಾಡಿದನು.

ಬಹುವಾಗಿ ಸಂತೋಷಪಟ್ಟ ಆ ಬಡ ಬ್ರಾಹ್ಮಣನ ಮುದಿ ಮುಖದಲ್ಲಿ ಕಳೆಯು ಮಿನುಗಿತು. ಮುಖವು ಅರಳಿತು. ತುಂಬು ಮನಸ್ಸಿನಿಂದ ಅವನು ಆ ಯುವಕನಿಗೆ ಆಶೀರ್ವಾದ ಮಾಡಿ ದಂಡಧಾರಿಯಾಗಿ ಅಲ್ಲಿಂದ ತೆರಳಿದನು. ಅವನ ಉತ್ಸಾಹವು ಹೊಸದಾಗಿ ಶಕ್ತಿಯನ್ನು ತಂದಿದ್ದಿತು. ಬೇಗ ಬೇಗ ಬ್ರಾಹ್ಮಣನು ಮುಂದೆ ನಡೆದನು.

ಲಾಟದೇಶದ ದೊರೆಯಾದ ಮತ್ತಕಾಲನಿಗೆ ಆ ಕಾಡು ಪ್ರದೇಶದ ದೊರೆಯಾದ ವೀರಕೇತುವಿನ ಮಗಳು ವಾಮಲೋಚನೆಯನ್ನು ಮದುವೆ ಯಾಗಬೇಕೆಂಬ ಆಶೆಯು ಹೆಚ್ಚಾಗಿದ್ದಿತು. ಮೇಲೆ ಮೇಲೆ ಅವನು ದೂತರ ಮುಖದಿಂದ ವೀರಕೇತುವನ್ನು ಇದಕ್ಕಾಗಿ ಪ್ರಾರ್ಥಿಸಿದ್ದನು. ಅನುಪಮ

ಸುಂದರಳಾದ ವಾಮಲೋಚನೆಯನ್ನು ತನಗೆ ಮದವೆ ಮಾಡಿಕೊಡದಿದ್ದರೆ ರಾಜಧಾನಿಯನ್ನು ಮುತ್ತುವಂತೆ ಹೆದರಿಸಿಯೂ ಹೆದರಿಸಿದನು. ಆದರೂ ವೀರಕೇತುವು ಸಗ್ಗಲಿಲ್ಲ. ಛಲಗಾರನಾದ ಮತ್ತಕಾಲನು ತನ್ನ ದೊಡ್ಡ ಸೈನ್ಯ ದೊಂದಿಗೆ ವೀರಕೇತುವಿನ ಮೇಲೆ ದಂಡೆತ್ತಿಬಂದನು. ವೀರಕೇತುವಿನ ರಾಜ್ಯ ವಾದರೋ ಸಣ್ಣದು. ಅವನಲ್ಲಿದ್ದ ಸೈನ್ಯವೂ ಅಲ್ಪವೇ. ಮತ್ತಕಾಲನನ್ನು ತಾನು ಗೆಲ್ಲುವೆನೆಂಬ ವಿಶ್ವಾಸವು ಅವನಿಗೆ ಹುಟ್ಟಲಿಲ್ಲ. ಆದ್ದರಿಂದ ಹೆದರಿದ ವೀರಕೇತುವು ಯುದ್ಧಕ್ಕೆ ಅವಕಾಶವನ್ನೇ ಕೊಡದೆ ಮಗಳನ್ನೇ ಕಾಣಿಕೆ ಯಾಗಿ ಲಾಟೇಶ್ವರನಿಗೆ ಒಪ್ಪಿಸಿಬಿಟ್ಟನು. ಹೇಗಾದರೂ ಇಷ್ಟಾರ್ಥವು ನೆರವೇರಿದ ಲಾಟಪತಿಯು ಆನಂದದಿಂದ ಹಿಂತಿರುಗಿದನು. ವಾಮಲೋಚನೆ ಯನ್ನು ಉಚಿತ ವೈಭವದಿಂದ ತನ್ನ ರಾಜಧಾನಿಯಲ್ಲೇ ಮದುವೆ ಮಾಡಿ ಕೊಳ್ಳ ಬಯಸಿದನು. ವಾಮಲೋಚನೆಯನ್ನೂ ಕರಮಕೊಂಡು ರಾಜ ಧಾನಿಯ ಕಡೆಗೆ ಹೊರಟನು. ಈ ಮಹಾರಣ್ಯದ ಮಾರ್ಗವಾಗಿಯೇ ಅವನ ಸೈನ್ಯವು ಮುಂದುವರೆಯಿತು. ದುಷ್ಟ ಮೃಗಗಳಿಗೆ ಆವಾಸ ಸ್ಥಾನವಾಗಿದ್ದ ಈ ಗೊಂಡಾರಣ್ಯವು ಬಹಳ ಭಯಂಕರವಾಗಿತ್ತು. ಬೇಟೆಯಾಡುವುದೆಂದರೆ ಮತ್ತಕಾಲನಿಗೆ ಬಹಳ ಇಷ್ಟ. ಮಾರ್ಗ ಮಧ್ಯದ ಆ ಆರಣ್ಯದಲ್ಲಿ ಕೆಲವು ದಿನಗಳ ಮಟ್ಟಿಗೆ ಬೇಟೆಯಾಡಬೇಕೆಂದು ಅವನು ಬಯಸಿದನು. ಆವನ ಅಪ್ಪಣೆಯಂತೆ ಸೈನಿಕರು ಡೇರೆಗಳನ್ನು ಸಿದ್ಧಗೊಳಿಸಿದರು. ಸಕಲ ಸಾಮಗ್ರೀ ಸಹಿತನಾಗಿ ಬಂದಿದ್ದ ಮತ್ತಕಾಲನು ಕೆಲದಿನಗಳ ಮಟ್ಟಿಗೆ ಆ ಅರಣ್ಯದಲ್ಲಿ ಬೀಡಾರಮಾಡಿದನು.

ವೀರಕೇತುವು ಹೇಡಿಯಂತೆ ವರ್ತಿಸಿದುದು ಅವನ ಮಂತ್ರಿಯಾದ ಮಾನಪಾಲನಿಗೆ ಸರಿತೋರಲಿಲ್ಲ. ಎಲ್ಲಕ್ಕಿಂತಲೂ ಮಾನವೇ ಮುಖ್ಯವೆಂದು ಅವನು ತಿಳಿದಿದ್ದನು. ಅವನು ಅರಸನ ಬಳಿಯಲ್ಲಿ ವಿಜ್ಞಾಪಿಸಿ ಮತ್ತಕಾಲ ನನ್ನು ಯಾವ ಉಪಾಯದಿಂದಲಾದರೂ ಗೆಲ್ಲಲು ಅಪ್ಪಣೆಪಡೆದನು. ಪ್ರಬಲ ನಾದ ಶತ್ರುವನ್ನು ಯುದ್ಧಮಾಡಿ ಗೆಲ್ಲುವುದು ಅಸಾಧ್ಯವೆಂದು ಅವನಿಗೆ ತಿಳ ಯದೆ ಇರಲಿಲ್ಲ. ಅದರಲ್ಲೂ ಯಾವಾಗಲೂ ಜಾಗರೂಕನಾಗಿ ರಕ್ಷಿತನಾಗಿದ್ದ ಮತ್ತಕಾಲನನ್ನು ಕೊಲ್ಲುವುದು ಸುಲಭವಾಗಿರಲಿಲ್ಲ. ರಾಜಪುತ್ರಿಯನ್ನು ತಕ್ಕ ವೈಭವದಿಂದ ಲಾಟರಾಜಧಾನಿಯನ್ನು ತಲಪಿಸುವ ನೆಪದಿಂದ ತನ್ನಲ್ಲಿದ್ದ

ಚತುರಂಗ ಸೈನ್ಯವನ್ನು ತೆಗೆದುಕೊಂಡು ಹೊರಟನು. ಅದೇ ಅರಣ್ಯದ ಮತ್ತೊಂದು ಭಾಗದಲ್ಲಿ ಅವನು ತನ್ನ ಶಿಬಿರವನ್ನು ಮಾಡಿದನು.

ರಾಜಸಭೆಗಾದ ಅವಮಾನದಿಂದ ಅವನ ಮನಸ್ಸು ನೊಂದಿದ್ದಿತು. ಅದಕ್ಕೆ ತಕ್ಕ ಪ್ರತೀಕಾರವನ್ನು ಮಾಡಲೇಬೇಕೆಂದು ಅವನು ನಿಶ್ಚಯಿಸಿದನು. ಅನೇಕ ಕಿಂಕರರನ್ನು ತನ್ನ ಬಳಿಗೆ ಬರಮಾಡಿಕೊಂಡನು. ಅವರಲ್ಲಿ ಕೆಲವರು ಆಪ್ತರನ್ನು ರಹಸ್ಯವಾಗಿ ಕರೆದು ಮತ್ತಕಾಲನ ಶಯನ ಗೃಹಕ್ಕೆ ಹೋಗಲನು ಕೂಲಿಸುವಂತೆ ಒಂದು ಸುರಂಗಮಾರ್ಗವನ್ನು ಸಿದ್ಧಪಡಿಸಲು ಅಪ್ಪಣೆ ಮಾಡಿದನು. ಕೆಲವು ದಿನಗಳಲ್ಲಿಯೇ ಮನುಷ್ಯನು ಓಡಾಡುವಷ್ಟು ದೊಡ್ಡ ದಾದ ಸುರಂಗದ್ವಾರವು ಸಿದ್ಧವಾಯಿತು. ಮಾನಪಾಲನ ಅಪ್ಪಣೆಯಂತೆ ಹತ್ತು ಜನ ಕಿಂಕರರು ಶಸ್ತ್ರಗಳನ್ನು ಕೈಯಲ್ಲಿ ಹಿಡಿದು ನಡುರಾತ್ರಿಯ ವೇಳೆಗೆ ಆ ಬಿಲವನ್ನು ಹೊಕ್ಕರು.

ಮತ್ತಕಾಲನನ್ನು ಕೊಂದು ಬಂದಲ್ಲಿ ಅವರಿಗೆ ದೊಡ್ಡ ಬಹುಮಾನ ದೊರೆಯುವಂತೆ ನಿಶ್ಚಯವಾಗಿತ್ತು. ಹುರುಪಿನಿಂದ ಅವರು ಶಯನ ಗೃಹ ವನ್ನು ನುಗ್ಗಿದರು. ನಾನು ಮುಂದು ತಾನು ಮುಂದು ಎಂದು ಶಯನ ಗೃಹದಲ್ಲಿ ಲಾಟೇಶ್ವರನನ್ನು ಹುಡುಕಿದರು. ಮತ್ತಕಾಲನು ಅಲ್ಲಿ ಮಲಗಿ ದ್ದಿದ್ದರೆ ಅಂದೇ ಅವನ ಆಯುಸ್ಸು ಮುಗಿದುಹೋಗಿರುತ್ತಿತ್ತು. ಕಾರಣಾಂತರ ದಿಂದ ಅವನು ಅಲ್ಲಿ ಮಲಗಿರಲಿಲ್ಲ. ಆದ್ದರಿಂದ ಅಲ್ಲಿದ್ದ ಮಂಚವು ಶೂನ್ಯ ವಾಗಿತ್ತು. ಕಿಂಕರರ ಆಶೆಯು ಬಯಲಾಯಿತು. ಅವರಿಗೆ ಮುಂದೇನು ಮಾಡಬೇಕೆಂದು ದಿಕ್ಕುತೋರಲಿಲ್ಲ. ಇಷ್ಟು ಉತ್ಸಾಹವೂ ವ್ಯರ್ಥವಾಯಿ ತೆಂದು ಅವರು ನೊಂದುಕೊಂಡರು. ಕೊನೆಗೆ ಹುಡುಕಿ ಅವರು ಅಲ್ಲಿದ್ದ ಆಭರಣಗಳ ಪೆಟ್ಟಿಗೆಯನ್ನು ತೆಗೆದರು. ಅದರಲ್ಲಿ ಬಹು ಬೆಲೆಬಾಳುವ ರತ್ನ ದಾಭರಣಗಳಿದ್ದುವು. ಲಾಟಾಧಿಪತಿಯನ್ನು ಕೊಲ್ಲದೆಯೇ ತಮಗೆ ಮೆಚ್ಚು ಸಿಕ್ಕಿತೆಂದು ಅವರಂದುಕೊಂಡು ಅವುಗಳನ್ನು ತೆಗೆದುಕೊಂಡು ಎಲ್ಲರೂ ಹೊರಟರು. ಸುರಂಗವನ್ನು ದಾಟಿ ಮೇಲಕ್ಕೆ ಬಂದರು. ಕೃತಕೃತ್ಯರಾಗ ದಿದ್ದುದರಿಂದ ಅವರಿಗೆ ಮಾನಪಾಲನಿಗೆ ಮುಖತೋರಿಸಲು ಇಷ್ಟಬರಲಿಲ್ಲ. ಎಲ್ಲರೂ ಆಲೋಚಿಸಿ ಆ ಅರಣ್ಯದ ನದಿಯ ದಡವನ್ನು ಸೇರಿದರು.

ಈ ವೇಳೆಗೆ ಅರುಣೋದಯವಾಗುತ್ತ ಬಂತು. ಚೆನ್ನಾಗಿ ಬೆಳಗಾಗು ವುದರೊಳಗೆ ಅಲ್ಲಿಂದ ಹೊರಡಬೇಕೆಂದು ನಿಶ್ಚಯಿಸಿ ಜಾಗ್ರತೆ ಎಲ್ಲ ಆಭರಣ ಗಳನ್ನೂ ತೆಗೆದುಕೊಂಡು ಆ ನದಿಯ ದಡದಲ್ಲಿಯೇ ಹೊರಟರು.

ಇತ್ತ ಮತ್ತಕಾಲನ ಶಿಬಿರವಲ್ಲಿ ಕೋಲಾಹಲ. ಶಿಬರದಲ್ಲೆಲ್ಲ ಯಾರ ಬಾಯಲ್ಲಿ ನೋಡಿದರೂ ಕಳುವಿನ ಮಾತೇ. ರಾಜನ ಅಲಂಕಾರಗಳೆಲ್ಲವೂ ಕಳುವಾಗಿದೆಯೆಂದು ವಾರ್ತೆ ಹಬ್ಬಿತು. ಕೂಡಲೆ ದಿಕ್ಕು ದಿಕ್ಕಿಗೆ ಅಧಿಕಾರಿ ಗಳೂ ದೂತರೂ ಕಳ್ಳರನ್ನು ಹುಡುಕುವುದಕ್ಕೆ ಹೊರಹೊರಟರು. ನದಿಯ ಕಡೆಗೆ ಬಂದ ರಾಜಾನುಚರರು ನಿರ್ಜನವಾದ ಆ ಪ್ರದೇಶದಲ್ಲಿ ಮರಳಿನಲ್ಲಿ ಬಿದ್ದಿದ್ದ ಹೆಜ್ಜೆಗಳನ್ನು ಕಂಡರು. ಮತ್ತೆ ಯಾರೂ ಬಂದಿರಲಿಲ್ಲವಾದ್ದರಿಂದ ಹೆಜ್ಜೆಯ ಗುರುತುಗಳು ಅಚ್ಚಳಿದಿರಲಿಲ್ಲ. ಆ ಗುರುತುಗಳನ್ನೇ ಅನುಸರಿಸಿ ಹೊರಟರು. ಸ್ವಲ್ಪ ದೂರ ಹೋಗುವುದರೊಳಗಾಗಿ ಜನರು ಮಾತಾಡಿ ಕೊಳ್ಳುತ್ತಿದ್ದ ಶಬ್ದವು ಅವರ ಕಿವಿಗೆ ಕೇಳಬಂತು. ಅವರು ಕಳ್ಳರೇ ಇರಬಹು ದೆಂದು ಊಹಿಸಿ ರಾಜದೂತರು ಸದ್ದಿಲ್ಲದೆ ಅವರನ್ನು ಸುತ್ತುಗಟ್ಟಿದರು. ಮಂತ್ರಿಕಿಂಕರರು ತಪ್ಪಿಸಿಕೊಂಡು ಹೋಗಲಾಗಲಿಲ್ಲ. ಎಲ್ಲರೂ ಮತ್ತಕಾಲನ ಕಿಂಕರರ ಕೈಗೆ ಸಿಕ್ಕಿಬಿದ್ದರು. ಅವರ ಬಳಿಯಲ್ಲಿ ಆಭರಣಗಳೂ ಇದ್ದುವು. ರಾಜಾನುಚರರು ಕಳ್ಳರನ್ನು ಒಡನೆಯೊಡನೆ ಹಿಡಿದು ರಾಜನ ಬಳಿಗೆ ಕರೆ ತಂದರು. ಬಹು ಬೆಲೆಬಾಳುವ ಒಂದೇ ಒಂದು ರತ್ನದ ಹೊರತು ಮಿಕ್ಕ ಎಲ್ಲ ಆಭರಣಗಳೂ ಸಿಕ್ಕಿದುವು. ಕಳ್ಳರಿಗೆ ಬಹುಮಾನ ಸಿಕ್ಕುವುದು ಹೋಗಿ ತಡೆಯಲಾರದಷ್ಟು ಪೆಟ್ಟುಗಳು ಬಿದ್ದುವು. ಆದರೂ ಅವರು ತಾವು ಮಾನಪಾಲನ ಕಡೆಯವರೆಂದಾಗಲೀ ಅವನಿಂದ ಪ್ರೇರಿತರಾಗಿ ಬಂದವರೆಂದಾ ಗಲೀ ತಿಳಿಸಲಿಲ್ಲ. ಮತ್ತೊಂದು ರತ್ನವೆಲ್ಲಿದೆಯೆಂದು ತಿಳಿಸುವವರೆಗೆ ಇವ ರನ್ನು ಬಂಧನದಲ್ಲಿಟ್ಟು ಅನಂತರ ಎಲ್ಲರನ್ನೂ ಒಟ್ಟಿಗೇ ಕೊಲ್ಲುವುದೆಂದು ರಾಜನು ತೀರ್ಪುಕೊಟ್ಟನು. ಅದರಂತೆ ಅಧಿಕಾರಿಗಳು ಅವರೆಲ್ಲರನ್ನೂ ಸಂಕೋಲೆಗಳಿಂದ ಬಿಗಿದು ಸೆರೆಯಲ್ಲಿಟ್ಟರು.

ರತ್ನವು ಅಮೂಲ್ಯವಾಗಿದ್ದುದರಿಂದ ಅದನ್ನು ಹುಡುಕುವುದಕ್ಕಾಗಿ ರಾಜನು ಅನೇಕ ಗೂಢಚಾರರನ್ನು ನಿಯಮಿಸಿದನು. ಆ ಗುಪ್ತಚಾರರು

ಸಮೀಪದ ಎಲ್ಲ ಊರುಗಳಲ್ಲೂ ಯಾರಿಗೂ ತಿಳಿಯದಂತೆ ಸಂಚರಿಸು ತ್ತಿದ್ದರು.

ಸೋಮದತ್ತನಿಂದ ರತ್ನವನ್ನು ಪಡೆದು ಹೊರಟ ಮುದಿ ಬ್ರಾಹ್ಮಣನು ತನ್ನ ಹರಕು ಬಟ್ಟೆಯಲ್ಲಿ ಬಿಗಿಯಾಗಿ ರತ್ನವನ್ನು ಕಟ್ಟಿಕೊಂಡು ಸಮೀಪದ ಊರಿಗೆ ಹೋಗುತ್ತಿದ್ದನು. ದಾರಿಯಲ್ಲಿ ಅವನು ಹೀಗೆ ಆಲೋಚಿಸತೊಡ ಗಿದನು. "ಇಂತಹ ಕಾಂತಿಯುಕ್ತವಾದ ರತ್ನವನ್ನು ನಾನೆಂದೂ ಹಿಂದೆ ನೋಡಿಲ್ಲ. ಇದನ್ನು ಮಾರಿದರೆ ನನ್ನ ವಂಶಪರಂಪರೆಯಾಗಿ ಬಡತನವು ನಮ್ಮನ್ನು ಕಾಡುವಂತಿಲ್ಲ. ಇದಲ್ಲವೇ ಅದೃಷ್ಟವೆಂಬುದು ! ಮನುಷ್ಯನ ಭಾಗ್ಯವನ್ನು ದೇವತೆಗಳು ಕೂಡ ಅರಿಯರೆಂಬುದು ಸತ್ಯವಾದ ಮಾತು." ಹೀಗೆ ಯೋಚಿಸಿಕೊಂಡು ಹೋಗುತ್ತಿರುವಲ್ಲಿ ಊರು ಸಿಕ್ಕಿತು. ಬ್ರಾಹ್ಮಣನು ಒಬ್ಬ ರತ್ನಪಡಿ ವ್ಯಾಪಾರಿಯ ಅಂಗಡಿಗೆ ಬಂದನು. ವ್ಯಾಪಾರಿಗೆ ಆಶ್ಚರ್ಯ ವಾಗುವಂತೆ ತನ್ನ ಹರಕು ಬಟ್ಟೆಯ ಗಂಟಿನಿಂದ ಒಂದು ರತ್ನವನ್ನು ತೆಗೆದು ಕೊಟ್ಟು ಇದಕ್ಕೆ ಬೆಲೆ ಏನು ಕೊಡುತ್ತೀಯೆ ಎಂದನು. ವ್ಯಾಪಾರಿಯು ರತ್ನದ ಹೊಳಪಿಗೆ ಬೆರಗಾಗಿ ಅದರ ಬೆಲೆಯನ್ನು ನಿರ್ಧರಿಸಲಾರದಾದನು. ಬ್ರಾಹ್ಮಣನು ಸುಮ್ಮನಿರದೆ "ಹರಕು ಬಟ್ಟೆಯಲ್ಲಿ ಕಟ್ಟಿದ್ದ ಮಾತ್ರಕ್ಕೇ ರತ್ನವು ತನ್ನ ಬೆಲೆಯನ್ನು ಕಳೆದುಕೊಳ್ಳುವುದೇ ?" ಎಂದು ಹೇಳಿ ಬೆಲೆ ನಿರ್ಧರಿಸು ವಂತೆ ಒತ್ತಾಯ ಪಡಿಸಿದನು. ವ್ಯಾಪಾರಿಯು ರತ್ನವನ್ನು ಬಿಡಲಾರ; ಬ್ರಾಹ್ಮಣನು ಸ್ವಲ್ಪ ಹಣಕ್ಕೆ ಅದನ್ನು ಕೊಡಲಾರ. ಹೀಗೆ ಸ್ವಲ್ಪ ಹೊತ್ತು ಇಬ್ಬರ ಮನಸ್ಸೂ ತೂಗಾಡುತ್ತಿತ್ತು.

ವ್ಯಾಪಾರಿಯ ಕಣ್ಣುಸನ್ನೆಯಂತೆ ಒಬ್ಬ ಪುರುಷನು ಬಂದು ಆ ಮುದಿ ಬ್ರಾಹ್ಮಣನನ್ನು ಹಿಡಿದನು. ರತ್ನವ್ಯಾಪಾರಿಯಾಗಿದ್ದ ಗೂಢಚಾರನು ಕೃತ ಕೃತ್ಯನಾಗಿ ರತ್ನವನ್ನು ತಂದಿದ್ದ ಬ್ರಾಹ್ಮಣನನ್ನು ಅಧಿಕಾರಿಗಳ ವಶಪಡಿಸಿ ದನು. ನಗರ ರಕ್ಷಣಾಧಿಕಾರಿಗಳು ಮುದುಕನಿಂದ ಆ ರತ್ನಲಾಭದ ಪ್ರಕಾರ ವನ್ನು ತಿಳಿಯಬಯಸಿ ಮುದುಕನೆಂದು ಕೂಡ ನೋಡದೆ ಅವನನ್ನು ಚಾವಟಿ ಯಿಂದ ಬಿಗಿದರು. ಮುದಿಹಾರುವನು ಆ ಪೆಟ್ಟನ್ನು ತಡೆಯಲಾರದೆ 'ದಮ್ಮಯ್ಯ, ನನ್ನನ್ನು ಬಿಡಿ. ನಾನು ಇದನ್ನು ಕದಿಯಲಿಲ್ಲ. ನನಗೆ ರತ್ನವನ್ನು ಕೊಟ್ಟ ಪುರುಷನು ಇಲ್ಲಿಯೇ ನದಿಯಾಚೆ ಅರಣ್ಯದಲ್ಲಿ ದೇವಸ್ಥಾನ

ದಲ್ಲಿದ್ದಾನೆ. ಬೇಕಾದರೆ ನನ್ನೊಡನೆ ಬನ್ನಿ. ನನಗೆ ರತ್ನವನ್ನು ಕೊಟ್ಟ ಕಳ್ಳನನ್ನು ತೋರಿಸುತ್ತೇನೆ.'' ಎಂದನು. ಅವನ ಕೈಗಳೆರಡನ್ನೂ ಹಿಂಗಟ್ಟು ಕಟ್ಟಿ ರಾಜಪುರುಷರು ಅವನೊಡನೆ ದೇವಾಲಯಕ್ಕೆ ಬಂದರು. ಸೋಮ ದತ್ತನು ಗಾಢನಿದ್ರೆಮಾಡುತ್ತಿದ್ದನು. ಬ್ರಾಹ್ಮಣನು ಅವನಕಡೆ ಕೈಬೆರಳನ್ನು ತೋರಿಸಿ ಇವನೇ ಆ ಕಳ್ಳನೆಂದನು.

ರಾಜಪುರುಷರ ಚಾವಟಿಯ ಪೆಟ್ಟು ಆ ತರುಣನನ್ನು ಎಚ್ಚರಿಸಿತು. ಕೂಡಲೆ ಅವನು ಎದ್ದು ಧೈರ್ಯದಿಂದ ರಾಜಪುರುಷರ ಕಡೆ ನೋಡಿದನು.

'ನಿನಗೆ ಈ ರತ್ನವೆಲ್ಲಿ ದೊರೆಯಿತು ?'

'ನದಿಯ ದಡದಲ್ಲಿ.'

'ಶಯನ ಗೃಹದಲ್ಲಿ ಅಲ್ಲವೇ ?'

'ಅಲ್ಲ.'

'ನಿನ್ನ ಉಳಿದ ಸ್ನೇಹಿತರೆಲ್ಲಿ ?'

'ನನಗೆ ಸ್ನೇಹಿತರಿಲ್ಲ.'

'ನಿನ್ನೊಡನೆ ಕಳ್ಳತನಕ್ಕೆ ಬಂದಿದ್ದವರು.'

'ಯಾರೂ ಇಲ್ಲ. ನಾನು ಕಳ್ಳತನವನ್ನು ಮಾಡಲೂ ಇಲ್ಲ.'

'ಹಾಗಾದರೆ ಬಾ. ನಾವೇ ನಿನ್ನ ಸ್ನೇಹಿತರೊಂದಿಗೆ ನಿನ್ನನ್ನು ಸೇರಿಸುತ್ತೇವೆ.'

ಎಂದು ರಾಜಪುರುಷರು ಆ ತರುಣನನ್ನು ಕರೆದುಕೊಂಡು ಬಂದರು. ಎಷ್ಟು ಸಲ ಹೇಳಿದರೂ ಸೋಮದತ್ತನ ಮಾತನ್ನು ಅವರು ನಂಬಲಿಲ್ಲ. ಕೊನೆಗೆ ಸೆರೆಮನೆಗೆ ಕರೆತಂದು " ಇದೋ ನಿನ್ನ ಸ್ನೇಹಿತರು " ಎಂದು ಹೇಳಿ ಕಾಲುಗಳಿಗೆ ಸಂಕೋಲೆಗಳನ್ನು ಬಿಗಿದು ಅಲ್ಲಿದ್ದ ಮಾನಪಾಲನ ಕಿಂಕರರ ಜೊತೆಯಲ್ಲಿ ಅವನನ್ನೂ ಸೆರೆಯಲ್ಲಿಟ್ಟರು.

೩

ಸೋಮದತ್ತನು ಆಶ್ಚರ್ಯ ಭರಿತನಾದನು. ನಿಷ್ಕಾರಣವಾಗಿ ತಾನು ಸೆರೆಯಾಳಾದುದೇ ಅವನ ಆಶ್ಚರ್ಯಕ್ಕೆ ಕಾರಣವಾಗಿತ್ತು. ತಾನು ಬ್ರಾಹ್ಮಣ

ನಿಗೆ ಉಪಕಾರವಾಗಲೆಂದು ಕೊಟ್ಟ ರತ್ನವು ಆ ಮುದುಕನ ದುಃಖಕ್ಕೆ ಕಾರಣ ವಾಯಿತಲ್ಲಾ ಎಂದು ಮನದಲ್ಲಿ ಮರುಗಿದನು. ತಾನು ಎಷ್ಟು ವಿಧವಾಗಿ ಹೇಳಿದರೂ ನಂಬದೆ ರಾಜಭಟರು ಗರ್ವದಿಂದ ತನ್ನನ್ನು ಕಳ್ಳನೆಂದು ನಿರ್ಣಯಿಸಿದ್ದುದರಿಂದ ಅವರ ವಿಷಯದಲ್ಲಿ ಕೋಪ ಉಕ್ಕಿತು. ಆದರೆ ಯಾವುದೊಂದೂ ವಿವರವಾಗಿ ತಿಳಿಯಲಾಗಲಿಲ್ಲ. ಏನಾದರೂ ಮಾಡಿ ಸೆರೆ ಮನೆಯಿಂದ ತಪ್ಪಿಸಿಕೊಂಡು ಹೋಗಿ ತಕ್ಕ ಪ್ರತೀಕಾರದಿಂದ ಸೇಡು ತೀರಿಸಿ ಕೊಳ್ಳಲು ಅವನು ಬಯಸಿದನು.

ಅದೇ ಸೆರೆಮನೆಯಲ್ಲಿ ಮೊದಲೇ ಬಂದಿಗಳಾಗಿದ್ದ ಮಾನಪಾಲ ದೂತರು ಇವನ ಅಚ್ಚುಕಟ್ಟಾದ ದೃಢವಾದ ದೇಹವನ್ನೂ, ಮುಖದಲ್ಲಿ ತೋರುತ್ತಿದ್ದ ಧೈರ್ಯಭಾವವನ್ನೂ ಮನಗಂಡು ಈ ಮಹಾನುಭಾವನಿಂದ ತಮಗೂ ಉಪ ಕಾರವಾಗಬಹುದೆಂದು ಸಂತೋಷಪಟ್ಟರು. ಬಂದಿಗಳಲ್ಲೊಬ್ಬನು ಧೈರ್ಯ ದಿಂದ ಮಾತನ್ನು ಪ್ರಾರಂಭಿಸಿದನು.

"ಮಹಾನುಭಾವ! ನಿನ್ನನ್ನೇಕೆ ಸೆರೆಹಿಡಿದರು?"

"ನನಗೆ ತಿಳಿಯದು. ನಾನು ರತ್ನವನ್ನು ಕದ್ದೆನೆಂದು ನನ್ನ ಮೇಲೆ ತಪ್ಪು ಹೊರಿಸಿದ್ದಾರೆ. ನೀವು ಯಾರು? ನೀವು ಬಂದಿಗಳಾಗಲು ಕಾರಣ ವೇನು?"

"ಈ ಮಹಾರಣ್ಯ ಪ್ರದೇಶಕ್ಕೆ ವೀರಕೇತುವೆಂಬ ಅರಸನಿದ್ದಾನೆ. ಅವನು ತನ್ನ ಏಕಮಾತ್ರ ಪುತ್ರಿ ವಾಮಲೋಚನೆಯನ್ನು ಹೇಡಿತನದಿಂದ ಲಾಟಾಧಿಪತಿ ಮತ್ತಕಾಲನಿಗೆ ಒಪ್ಪಿಸಿದನು. ಇದರಿಂದ ನೊಂದ ಆತನ ಮಂತ್ರಿ ಮಾನಪಾಲನು ಮತ್ತಕಾಲನನ್ನು ಕೊಲ್ಲುವಂತೆ ಅಪ್ಪಣೆಮಾಡಿ ನಮ್ಮನ್ನು ಸುರಂಗದ ಮೂಲಕ ಅವನ ಶಯನಗೃಹಕ್ಕೆ ಕಳುಹಿಸಿದನು. ಮತ್ತಕಾಲ ನನ್ನು ಅಲ್ಲಿ ಕಾಣದೆ ನಾವು ಅಲ್ಲಿದ್ದ ಒಡವೆಗಳನ್ನು ತೆಗೆದುಕೊಂಡು ಹೊರ ಟೆವು. ರಾಜಭಟರ ಕೈಗೆ ಸಿಕ್ಕಿಬಿದ್ದೆವು. ಒಂದು ಅಮೂಲ್ಯ ರತ್ನ ದೊರೆಯ ಲಿಲ್ಲವೆಂದು ನಮ್ಮನ್ನು ಸೆರೆಯಲ್ಲಿಟ್ಟಿದ್ದಾರೆ."

"ನಾನು ನೀರು ಕುಡಿಯಲು ನದಿಗೆ ಹೋದೆ. ಹಿಂತಿರುಗಿ ಬರುವಾಗ ನನಗೊಂದು ರತ್ನದೊರೆಯಿತು. ಪ್ರಾಯಃ ಅದೇ ಆ ರತ್ನವಿದ್ದಿರಬೇಕು."

"ಮಹಾ ಭಾಗ್ಯ, ನಿನ್ನ ವಿಚಾರವನ್ನು ವಿಸ್ತಾರವಾಗಿ ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ."

"ನಾನು ಮಗಧದೇಶದ ರಾಜಪುತ್ರ ರಾಜವಾಹನನ ಗೆಳೆಯ. ವಿಜಯಯಾತ್ರೆಗೆಂದು ಹಿಂಬಾಲಿಸಿದ್ದ ನಮ್ಮನ್ನು ಬಿಟ್ಟು ಆತನು ಎಲ್ಲಿಯೋ ಹೋಗಿರುವನು. ಅವನನ್ನು ಹುಡುಕಿಕೊಂಡು ತಿರುಗುತ್ತಿದ್ದೇನೆ. ಈಗ ನೀವು ಇಷ್ಟಪಡುವುದಾದರೆ ಇಲ್ಲಿಂದ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸೋಣ."

"ಯಾರಾದರೂ ಸೆರೆಮನೆಯಲ್ಲಿರಬಯಸುವರೇ?"

"ನಿಷ್ಕಾರಣವಾಗಿ ನನ್ನನ್ನು ದಂಡಿಸಿದ ಮತ್ತಕಾಲನನ್ನು ಕೊಲ್ಲದೆ ನನಗೆ ತೃಪ್ತಿಯಿಲ್ಲ. ಹೇಗಾದರೂ ಮಾಡಿ ನಿಮ್ಮ ಮಂತ್ರಿಯ ಬಳಿಗೆ ನನ್ನನ್ನು ಸೇರಿಸಿ!"

"ನಿನ್ನ ಸಾಹಸವೇ ನಿನ್ನನ್ನು ಸೇರಿಸುತ್ತದೆ."

ಬಂದಿಗಳು ಅವನನ್ನು ತಮ್ಮ ಬಿಡುಗಡೆಗಾಗಿ ಬಂದ ದೇವರೆಂದು ಬಗೆದರು. ಸೋಮದತ್ತನ ಧೈರ್ಯದ ಮಾತುಗಳು ಅವರನ್ನು ಸಂತೋಷಪಡಿಸಿದುವು. ಅರ್ಧರಾತ್ರಿಯವರೆಗೂ ಅವರೆಲ್ಲರೂ ಸುಮ್ಮನೆ ಇದ್ದರು. ಆ ತರುಣನು ಮಾತ್ರ ತನ್ನ ಕಾಲಿನ ಸಂಕಲೆಗಳನ್ನು ಮುರಿಯಲು ಹಗಲೆಲ್ಲ ಪ್ರಯತ್ನಿಸಿದನು. ಕತ್ತಲಾಗುವ ವೇಳೆಗೆ ತನ್ನ ಪ್ರಯತ್ನದಲ್ಲಿ ಸಿದ್ಧಿಯು ದೊರೆಯುವಂತೆ ಅವನಿಗೆ ಕಂಡು ಬಂತು. ದೃಢವಾದ ಕಬ್ಬಿಣದ ಸರಪಣಿಯು ಅವನ ಬಲಕ್ಕೆ ಬಗ್ಗಿತು. ನಡುರಾತ್ರಿಯವರೆಗೆ, ಮಿಕ್ಕ ಬಂದಿಗಳ ಸಂಕಲೆಗಳನ್ನು ಮುರಿದು ಎಲ್ಲರನ್ನೂ ಸ್ವತಂತ್ರರನ್ನಾಗಿ ಮಾಡಿದನು. ಬಾಗಿಲಲ್ಲಿ ಅನೇಕರು ಆಯುಧಪಾಣಿಗಳಾದ ಕಾವಲುಗಾರರಿದ್ದರು. ಅವರಿಗೆ ಸೆರೆಮನೆಯಲ್ಲಿ ಏನು ನಡೆಯುತ್ತಿತ್ತೆಂದು ತಿಳಿಯಲೇ ಇಲ್ಲ. ಅಧಿಕಾರಿಗಳು ಬಂದು ನೋಡಿಕೊಂಡು ಹೋದರು. ಬಂದಿಗಳು ಯಾರೂ ತಪ್ಪಿಸಿಕೊಂಡು ಹೋಗಿರಲಿಲ್ಲ. ನಡುರಾತ್ರಿಯ ವೇಳೆಗೆ ನಿದ್ದೆಯು ಒಬ್ಬೊಬ್ಬನನ್ನೇ ನಿಶ್ಚೇತನನ್ನಾಗಿ ಮಾಡುತ್ತ ಬಂದಿತು. ಎಲ್ಲರೂ ಆಯುಧಗಳನ್ನು ಹಿಡಿದು ಹಾಗೇ ತೂಕಡಿಸುತ್ತಿದ್ದರು. ಒಬ್ಬೊಬ್ಬನ ಕೈಯ ಆಯುಧವೂ ಜಾರುತ್ತ ಬಂತು. ಎಲ್ಲರೂ ನೆಲವನ್ನಾಶ್ರಯಿಸಿ ಗಾಢನಿದ್ದೆಯಲ್ಲಿ ಮೈಮರೆತರು. ಇದೇ ಸಮಯ

ವೆಂದು ತರುಣನು ಜೊತೆಯ ಬಂದಿಗಳಿಗೆ ಸನ್ನೆಮಾಡಿದನು. ಎಲ್ಲರೂ ಸೇರಿ ಬಾಗಿಲ ಕಂಬಿಗಳನ್ನು ಕಿತ್ತು ಆಯಾಸವಿಲ್ಲದೆ ಹೊರಕ್ಕೆ ಬಂದರು. ಎಚ್ಚರ ತಪ್ಪಿ ನಿದ್ರಿಸುತ್ತಿದ್ದ ಕಾವಲುಗಾರರ ಬಳಿ ಬಿದ್ದಿದ್ದ ಆಯುಧಗಳನ್ನು ಕೈಗೆ ತೆಗೆದುಕೊಂಡು ಸದ್ದಿಲ್ಲದೆ ಹೊರಟರು. ರಾಜ ಬೀದಿಯಲ್ಲಿ ಹೋಗುತ್ತಿದ್ದ ಇವರನ್ನು ನಗರ ರಕ್ಷಕರು ಅಟ್ಟಿಸಿಕೊಂಡು ಬಂದರು. ಧೈರ್ಯಶಾಲಿಯಾದ ತರುಣನು ಒಡನಾಡಿಗಳನ್ನು ಅವಿತುಕೊಳ್ಳುವಂತೆ ಹೇಳಿ ತಾನೂ ಅವಿತುಕೊಂಡನು. ಒಟ್ಟಿಗೆ ಒಂದೆಡೆ ಸೇರಿದ ನಗರ ರಕ್ಷಕರನ್ನು ಎಲ್ಲರೂ ಮುತ್ತಿದರು. ಸೋಮದತ್ತನು ಒಬ್ಬಿಬ್ಬರನ್ನು ಸೋಲಿಸಿ ಕೊಂದುಹಾಕಿದನು. ಮಿಕ್ಕ ರಕ್ಷಕರನ್ನು ಅಟ್ಟಿಸಿಕೊಂಡು ಹೋಗಿ ಕಿಂಕರರು ಕೊಂದರು. ಹೀಗೆ ಸಾಹಸದಿಂದ ಎಲ್ಲರೂ ಸುರಕ್ಷಿತವಾಗಿ ಮುಂದೆ ಸಾಗಿದರು. ಸೋಮದತ್ತನೊಂದಿಗೆ ಮಾನಪಾಲನ ಶಿಬಿರಕ್ಕೆ ಬಂದು ಸೇರಿದರು. ಮಾನಪಾಲನು ತರುಣನ ಪರಾಕ್ರಮಕ್ಕೆ ಮೆಚ್ಚಿ ಅವನ ಕುಲ ಶೀಲಗಳನ್ನು ಕೇಳಿ ತಿಳಿದು ಬಹುಮಾನಿಸಿದನು.

ಬೆಳಗಾಯಿತು. ಇತ್ತ ಸೆರೆಯಲ್ಲಿದ್ದ ಬಂದಿಗಳು ತಪ್ಪಿಸಿಕೊಂಡು ಹೋದರೆಂದು ಮತ್ತಕಾಲನ ಶಿಬಿರದಲ್ಲೆಲ್ಲ ಕೋಲಾಹಲವೆದ್ದಿತು. ಎಲ್ಲೆಲ್ಲಿ ಹುಡುಕಿದರೂ ಬಂದಿಗಳು ಸಿಗಲಿಲ್ಲ. ಕಳೆದುಳಿದಿದ್ದ ನಗರ ರಕ್ಷಕನೊಬ್ಬನು 'ಸ್ವಾಮಿ, ಅವರು ಅಪರ ರಾತ್ರಿಯಲ್ಲಿ ಮಾನಪಾಲನ ಶಿಬಿರದ ಕಡೆಗೆ ಹೋಗುತ್ತಿದ್ದ'ರೆಂದು ತಿಳಿಸಿದನು. ಇದಕ್ಕೆಲ್ಲ ಆ ಮಂತ್ರಿಯೇ ಕಾರಣನೆಂದು ಮತ್ತಕಾಲನಿಗೆ ತಿಳಿದುಬಂತು. ಅವನು ಕೋಪದಿಂದ ಕಿಡಿಕಿಡಿಯಾದನು. ಕೆಲವು ದೂತರನ್ನು ಕರೆದು ಮಾನಪಾಲನ ಬಳಿಗೆ ಕಳುಹಿದನು. ಬಂದ ದೂತರು ಸಮಯವರಿತು ಮಾನಪಾಲನನ್ನು ಕಂಡು ಕೈಮುಗಿದು ಬಿನ್ನವಿಸಿದರು.

"ಮಂತ್ರಿವರ್ಯ! ನಮ್ಮಮೂಲಕ ಲಾಟಾಧಿಪತಿಯು ಎಚ್ಚರಿಸುವುದೇನೆಂದರೆ :– 'ಕೆಲವು ಕಳ್ಳರು ಸುರಂಗದಮೂಲಕ ನನ್ನ ಅರಮನೆಯನ್ನು ಹೊಕ್ಕು ಅನೇಕ ಬೆಲೆಬಾಳುವ ಆಭರಣಗಳನ್ನು ಅಪಹರಿಸಿಕೊಂಡು ನಿನ್ನ ಶಿಬಿರವನ್ನು ಪ್ರವೇಶಿಸಿದ್ದಾರೆ. ಅವರನ್ನು ನನಗೆ ಒಪ್ಪಿಸಿದರೆ ಸರಿ. ಇಲ್ಲವಾದರೆ ಮಹಾನರ್ಥಕ್ಕೆ ಕಾರಣವಾದೀತು.' ಲಾಟೇಶ್ವರನ ಮಾತುಗಳನ್ನು

ದೂತರ ಮೂಲಕ ಕೇಳಿ ಮೊದಲೇ ಕೋಪದಿಂದ ಕುದಿಯುತ್ತಿದ್ದ ಮಾನ ಧನನಾದ ಮಾನಪಾಲನಿಗೆ ಮತ್ತಷ್ಟು ಕೋಪ ಉಕ್ಕಿತು. ಈ ಬಗೆಯ ಹೆಮ್ಮೆಯ ಮಾತುಗಳು ಅವನ ಕಿವಿಗೆ ಕರ್ಕಶವಾದುವು. ಕಣ್ಣು ಕೆಂಪಾಯಿತು. ಕೋಪದಿಂದವನು 'ಯಾರವನು ಲಾಟಪತಿ? ಆ ನೀಚನೊಡನೆ ಗೆಳೆತನ ವೆಂದರೇನು? ಅವನ ಸೇವೆಯಿಂದ ನಮಗೆ ದೊರೆಯುವ ಲಾಭವಾದರೂ ಏನು? ಕಳ್ಳರು ನಮ್ಮ ಬಳಿಗೆ ಏಕೆ ಬರುವರು? ಬಂದಿದ್ದರೂ ಈ ಗೊಡ್ಡು ಬೆದರಿಕೆಗಳಿಗೆ ಮಾನಪಾಲನು ಹೆದರಿ ಅವರನ್ನು ಒಪ್ಪಿಸುವನೇ? ಮತ್ತನಾದ ಮತ್ತಕಾಲನಿಗೆ ಬಲವಿದ್ದಲ್ಲಿ ತೋರಿಸಿ ಅವರನ್ನು ಕಸಿದುಕೊಳ್ಳಲಿ. ಮಾತಿ ನಿಂದ ಮಾವಿನಕಾಯಿಗಳು ಉದುರುವುದಿಲ್ಲ' ಎಂದು ಗರ್ಜಿಸಿದನು. ಪಕ್ಕದಲ್ಲಿದ್ದ ಸೋಮದತ್ತನ ಕಡೆ ನೋಡಿದನು. ಆ ತರುಣನು ನಸುನಗೆ ಯಿಂದ ತನ್ನ ಒಪ್ಪಿಗೆಯನ್ನು ಸೂಚಿಸಿದನು. ಮತ್ತಕಾಲನ ದೂತರು ಹಿಂತಿರುಗಿದರು. ಮೊದಲೇ ಹೇಗಾದರೂ ಯುದ್ಧಕ್ಕೆ ಒಂದು ನೆಪವನ್ನು ಕಾಯುತ್ತಿದ್ದ ಆ ಮಂತ್ರಿಯು ಇದನ್ನೇ ಕಾರಣವಾಗಿಟ್ಟುಕೊಂಡು ಸೈನ್ಯವನ್ನು ಸಜ್ಜುಗೊಳಿಸಿದನು.

ದೂತರು ಮಾನಪಾಲನ ಮಾತನ್ನು ಹಾಗೆಯೇ ಲಾಟರಾಜನಿಗೆ ತಿಳಿಸಿದರು. ಅವನ ನೆತ್ತರು ಕುದಿಯಲಾರಂಭಿಸಿತು. "ಸಣ್ಣದೊಂದು ರಾಜ್ಯದ ಅಧಿಪತಿಯಾದ ವೀರಕೇತುವಿನ ಮಂತ್ರಿಗೆ ಇಷ್ಟೊಂದು ಧೈರ್ಯ ಬಂತೇ? ಆಗಲಿ. ತಕ್ಕ ಶಾಂತಿಯನ್ನು ಮಾಡುತ್ತೇನೆ. ಕಳ್ಳರನ್ನಷ್ಟೇ ಅಲ್ಲ. ರಾಜ್ಯವನ್ನೇ ಕಸಿದುಕೊಳ್ಳುತ್ತೇನೆ. ನನ್ನ ತೋಳ್ಬಲವನ್ನೂ ನೋಡಲಿ" ಎಂದು ಗುಡುಗುಡಿಸಿದನು.

೪

ಮಾರನೆಯ ದಿನ ಇರ್ಕಡೆಗಳಲ್ಲೂ ಯುದ್ಧೋದ್ಯಮ. ಮಾನಪಾಲನು ಮೊದಲೇ ಯುದ್ಧಮಾಡಿ ಗೆಲ್ಲಬೇಕೆಂದು ನಿಶ್ಚಯಿಸಿದ್ದುದರಿಂದ ಬೇಕಾದ ಸಕಲ ಸಾಮಗ್ರಿಗಳೊಡನೆ ಹೆಚ್ಚಾದ ಸೈನ್ಯವನ್ನು ಶೇಖರಿಸಿದನು. ತೇರು ಗಳಲ್ಲಿ ಮಹಾರಥಿಕರು ಬಾಣ ಬತ್ತಳಿಕೆಗಳೊಡನೆ ಯುದ್ಧಕ್ಕೆ ಸಿದ್ಧರಾಗಿ ಕುಳಿ

ತಿದ್ದರು. ಭಲ್ಲೆ ಮುಂತಾದ ಆಯುಧಗಳನ್ನು ಹಿಡಿದು ವೀರಾಧಿ ವೀರರು ಮುನ್ನುಗ್ಗುವ ಉತ್ಸಾಹದಿಂದ ಆನೆಗಳ ಮೇಲೆ ಕುಳಿತಿದ್ದರು. ಕುದುರೆಗಳ ಮೇಲೆ ರಾವುತರು ವಿರಾಜಮಾನರಾಗಿ ಆಯುಧಗಳನ್ನು ಹಿಡಿದು ಶತ್ರುಗಳ ಕೊಲೆಗೆ ಕಾಯುತ್ತಿದ್ದರು. ಅನೇಕ ಸಾವಿರ ಕಾಲಾಳುಗಳು ಕತ್ತಿ ಗುರಾಣಿ ಗಳನ್ನು ಹಿಡಿದು ಸಾಲುಸಾಲಾಗಿ ನಿಂತಿದ್ದರು. ಅವರ ಉತ್ಸಾಹವು ಅವರಿ ಗಿಂತ ಮುಂಚೆ ಶತ್ರು ಸೈನ್ಯವನ್ನು ಪ್ರವೇಶಿಸಿತ್ತು. ಮಾನಪಾಲನು ಆ ತರುಣ ನನ್ನು ಬರಮಾಡಿದನು. ಅವನ ಧೈರ್ಯ ಸಾಹಸಗಳಿಗೆ ಮೆಚ್ಚಿ ಅವನನ್ನು ಸೇನಾಪತಿಯನ್ನಾಗಿಮಾಡಿದನು. ನಾಲ್ಕು ಕುದುರೆಗಳನ್ನು ಕಟ್ಟಿದ್ದ ವಿವಿಧ ಬಾಣಗಳಿಂದ ತುಂಬಿದ್ದ ರಥದಲ್ಲಿ ಎರಡು ಬತ್ತಳಿಕೆಗಳು ಸಿದ್ಧವಾಗಿದ್ದುವು. ನಿಪುಣನಾದ ಸಾರಥಿಯು ತೇರಿನ ಮುಂಭಾಗದಲ್ಲಿ ಹಗ್ಗಗಳನ್ನು ಹಿಡಿದು ಕುಳಿತಿದ್ದನು. ಶತ್ರುಗಳ ಬಾಣಗಳಿಗೆ ಅಭೇದ್ಯವಾದ ಕವಚವನ್ನು ತೊಟ್ಟು ತನ್ನ ಯೋಗ್ಯತೆಗೆ ತಕ್ಕ ಬಾಣವನ್ನು ಹಿಡಿದು ತಂಬುಲವನ್ನು ಸವಿಯುತ್ತಾ ಆ ತರುಣನು ತೇರಿನಲ್ಲಿ ಮಂಡಿಸಿದ್ದನು. ಯುದ್ಧಕ್ಕೆ ಆವಶ್ಯಕವಾದ ಆಯುಧಗಳು ಆ ತೇರಿನಲ್ಲಿ ರಾಶಿರಾಶಿಯಾಗಿ ಬಿದ್ದಿದ್ದುವು. ಆ ತರುಣನ ಅಂಕೆಯಲ್ಲಿ ಮಿಕ್ಕ ಸೈನ್ಯವೆಲ್ಲ ಇತ್ತು. ಮಾನಪಾಲನು ಆ ತರುಣನನ್ನು ಮನವಾರೆ ನೋಡಿ ಶತ್ರುವನ್ನು ನಿರ್ಮೂಲ ಮಾಡುವ ಸಾಮರ್ಥ್ಯವು ಅವನ ಲ್ಲಿದೆಯೆಂದು ಧೈರ್ಯಗೊಂಡನು. ಮಂತ್ರಿಯು ಮುಂದೆ ಹೊರಟನು. ತರುಣರಥಿಕನು ಅವನನ್ನೇ ಹಿಂಬಾಲಿಸಿ ತೇರನ್ನು ನಡೆಸಿದನು. ಅಸಂಖ್ಯಾತ ಸೈನ್ಯವು ಅವನನ್ನು ಹಿಂಬಾಲಿಸಿತು.

ಇತ್ತ ಲಾಟೇಶ್ವರನೂ ಯುದ್ಧಕ್ಕೆ ಸಜ್ಜುಗೊಳಿಸಿಕೊಂಡನು. ಅವನ ಅನೇಕ ಸೈನ್ಯ ಈಗಾಗಲೇ ರಾಜಧಾನಿಗೆ ಹೊರಟು ಹೋಗಿತ್ತು. ಆ ಅರಣ್ಯದ ಶಿಬಿರದಲ್ಲಿ ಹೆಚ್ಚು ಸೈನ್ಯವಿರಲಿಲ್ಲ. ಇದ್ದ ಸೈನಿಕರಿಗೂ ತಕ್ಕಷ್ಟು ಆಯುಧ ಸಾಮಾಗ್ರಿಗಳಿರಲಿಲ್ಲ. ಬಾಹುಬಲ ಮತ್ತನಾದ ಮತ್ತಕಾಲನು ಇದೊಂದನ್ನೂ ಲೆಕ್ಕಿಸಲಿಲ್ಲ. ತನ್ನ ವಿಜಯದಲ್ಲಿ ಎಂದಿನಂತೆ ವಿಶ್ವಾಸವುಳ್ಳವನಾಗಿ ಆ ಅಲ್ಪ ಸ್ವಲ್ಪ ಸೈನ್ಯವನ್ನೇ ತೆಗೆದುಕೊಂಡು ಮಾನಪಾಲನ ಸೈನ್ಯದ ಮೇಲೆ ನುಗ್ಗಿದನು. ಎರಡು ಕಡೆಗಳಲ್ಲೂ ಶತ್ರುಗಳು ಹುರುಪಿನಿಂದ ಹೊಡೆದಾಡಿದರು. ಘೋರ ಯುದ್ಧವಾಯಿತು. ಸೈನಿಕರ ರಕ್ತದಿಂದ ರಣಕ್ಷೇತ್ರವು ಕೆಸರಾಯಿತು. ಶತ್ರು

ಸೈನಿಕರ ಮೈಯಲ್ಲೆಲ್ಲಾ ತರುಣನ ಬಾಣಗಳೇ ನೆಟ್ಟದ್ದುವು. ಶತ್ರುಸೈನಿಕರ ಮೃತ್ಯುದೇವತೆಯ ರಥದಂತೆ ಅವನ ರಥವು ಆ ರಣಕ್ಷೇತ್ರದಲ್ಲೆಲ್ಲಾ ಓಡಾಡು ತ್ತಿತ್ತು. ಇದ್ದ ಅಲ್ಪ ಸೈನ್ಯವೂ ಮತ್ತಕಾಲನನ್ನು ಬಿಟ್ಟು ಯಮನಗರವನ್ನು ಸೇರಿತು.

ತರುಣನು ಇಮ್ಮಡಿಯಾದ ಉತ್ಸಾಹದಿಂದ ತೇರನ್ನು ಮುನ್ನುಗ್ಗಿಸು ತ್ತಿದ್ದನು. ಎದುರು ಬಂದ ಸೈನಿಕರನ್ನು ಕೂಡ ಲೆಕ್ಕಿಸದೆ ಶತ್ರು ಸೈನ್ಯದಲ್ಲಿ ನುಗ್ಗಿದನು. ಲಾಟಾದಿಪತಿಯಾದ ಮತ್ತಕಾಲನ ರಥವು ಎಲ್ಲಿದೆಯೆಂದು ಹುಡುಕುತ್ತಾ ಅದನ್ನೇ ಅಟ್ಟಿಸಿಕೊಂಡು ಹೋದನು. ಅವನ ಬಿಲ್ಲಿನಿಂದ ಹೊರಟ ಬಾಣಗಳು ಮತ್ತಕಾಲನ ಅಂಗಾಂಗಗಳನ್ನು ಆಶ್ರಯಿಸಿದುವು. ಮತ್ತಕಾಲನೂ ಧೈರ್ಯಗೆಡಲಿಲ್ಲ. ತನ್ನ ಅಪಜಯವು ಅನಿವಾರ್ಯವೆಂದು ತಿಳಿದೂ ಅವನು ವೀರನಂತೆ ಸ್ವಾಭಿಮಾನದಿಂದ ಯುದ್ಧಮಾಡುತ್ತಿದ್ದನು. ಬರಬರುತ್ತ ತರುಣನ ರಥವು ಮತ್ತಕಾಲನ ರಥದ ಹತ್ತಿರಕ್ಕೆ ಬಂದಿತು. ಮತ್ತ ಕಾಲನು ತನ್ನ ರಥವನ್ನು ಹಿಂದಕ್ಕೆ ನರಿಸುವಷ್ಟರಲ್ಲಿ ಆ ಯುವಕನು ತನ್ನ ತೇರಿನಿಂದ ನೆಗೆದನು. ಅವನ ಕೈಯಲ್ಲಿ ತೀಕ್ಷ್ಣವಾದ ಖಡ್ಗವಿತ್ತು. ಮತ್ತ ಕಾಲನ ರಥಕ್ಕೆ ಹಾರಿದ ಯುವಕನು ಅರಸನು ಕೈಯೆತ್ತುವುದರೊಳಗಾಗಿ ಅವನ ರುಂಡವನ್ನು ಮುಂಡದಿಂದ ಬೇರ್ಪಡಿಸಿದನು. ರಾಜನು ಬಿದ್ದುದೇ ತಡ. ಉಳಿದ ಸೈನಿಕರು ತಮ್ಮ ತಮ್ಮ ಕಾಲಿಗೆ ಬುದ್ಧಿ ಹೇಳಿದರು. ಶತ್ರುಗಳ ಅನೇಕ ಆಯುಧಗಳೂ ಬೆಲೆಬಾಳುವ ಆಭರಣಗಳೂ, ಕುದುರೆ ಆನೆ ಮುಂತಾ ದುವೂ ಮಂತ್ರಿ ಸೈನಿಕರ ಕೈಸೇರಿದುವು. ರಾಜನ ಶಿಬಿರವನ್ನು ಕೊಳ್ಳೆ ಹೊಡೆದು ಸೈನಿಕರು ಹಿಂತಿರುಗಿದರು. ಲಾಟರಾಜಧಾನಿಗೆ ಹೋಗಲಿದ್ದ ರಾಜ ಪುತ್ರಿಯಾದ ವಾಮಲೋಚನೆಯನ್ನು ಕರೆದುಕೊಂಡು ತರುಣನು ಮಾನ ಪಾಲನ ಬಳಿಗೆ ಬಂದನು. ಆ ತರುಣನ ಸಾಹಸಕ್ಕೆ ಅರಗುವರಿಯು ಮೆಚ್ಚಿ ದಳು. ವಿಜಯದಿಂದ ಹಿಗ್ಗಿದ ಮಾನಪಾಲನು ಆ ನವತರುಣನನ್ನು ಬಹು ಮಾನ ಪೂರ್ವಕ ಇದಿರುಗೊಂಡು ಅನೇಕ ರೀತಿಯಲ್ಲಿ ಅವನನ್ನು ಸನ್ಮಾನಿಸಿ ದನು. ಎಲ್ಲರೂ ಉತ್ಸಾಹದಿಂದ ರಾಜಧಾನಿಗೆ ತೆರಳಿದರು.

ಮಾನಪಾಲನು ಅರಸನಾದ ವೀರಕೇತುವಿನ ಬಳಿಗೆ ದೂತರನ್ನು ಅಟ್ಟಿ ತನ್ನ ವಿಜಯವಾರ್ತೆಯನ್ನು ತಿಳಿಸಿದನು. ರಾಜನು ದೂತರಿಂದ ಆ ತರುಣ

ಸಾಹಸಿಯ ಕಾರ್ಯವನ್ನು ತಿಳಿದು ಅದಕ್ಕೆ ಮೆಚ್ಚಿ ತಲೆದೂಗಿದನು. "ಈ ಅಸಮಾನ ಪರಾಕ್ರಮಿಯು ಯಾರಿರಬಹುದು? ಯಾರೇ ಆಗಿರಲಿ ಅವನೇ ತನ್ನ ಕುವರಿಗೆ ತಕ್ಕ ವರನು. ನನ್ನ ಈ ದೇಶಕ್ಕೂ ತಾನೇ ಗೆದ್ದಿರುವ ಆ ಲಾಟದೇಶಕ್ಕೂ ಅವನೇ ಅಧಿಪತಿಯಾಗತಕ್ಕವನು. ಅವನೇ ನನ್ನ ಕೀರ್ತಿಲತೆಯನ್ನು ಒಣಗಗೊಡದೆ ಕಳಕಳಿಸುವಂತೆ ಇಟ್ಟ ಪರ್ಜನ್ಯ ದೇವನು" ಎಂದು ಮುಂತಾಗಿ ಯೋಚಿಸಿ ವೀರಕೇತು ರಾಜನು ತಕ್ಕ ವೈಭವ ದೊಡನೆ ಆ ವಿಜಯ ಶೀಲನಾದ ಕುಮಾರನನ್ನು ಎದುರುಗೊಳ್ಳಬೇಕೆಂದು ಹೊರಟನು. ಗುಡಿ ತೋರಣಗಳಿಂದ ಅಲಂಕೃತವಾಗಿದ್ದ ಆ ಸುಂದರ ನಗರವನ್ನು ಮಂತ್ರಿಯೊಡನೆ ಬಂದ ಆ ತರುಣನನ್ನು ಪ್ರವೇಶಮಾಡಿಸಿದನು.

ಮಂತ್ರಿಗಳ ಮತ್ತು ಪಟ್ಟಣದ ಮುಖ್ಯ ಜನರ ಸಭೆಯೊಂದನ್ನು ರಾಜನು ನೆರೆಯಿಸಿದನು. ಆ ಸಭೆಯಲ್ಲಿ ಎಲ್ಲರಿಗೂ ತರುಣನ ಸಾಹಸವನ್ನು ವಿವರಿಸಿ ತನ್ನ ಪುತ್ರಿಯಾದ ವಾಮಲೋಚನೆಯನ್ನು ಆತನಿಗೆ ಕೊಟ್ಟು ವಿವಾಹ ಮಾಡಲು ಅವರೆಲ್ಲರ ಅನುಮತಿಯನ್ನು ಕೇಳಿದನು. ಸತ್ಕುಲೀನ ನಾದ ಅವನಿಗೆ ರಾಜಪುತ್ರಿಯನ್ನು ಕೊಡಲು ಎಲ್ಲರೂ ಒಪ್ಪಿದರು. ಶುಭ ಮುಹೂರ್ತದಲ್ಲಿ ಉಚಿತ ವೈಭವದಿಂದ ಲಗ್ನವು ನಡೆದು ವಾಮಲೋಚನೆಯು ಸೋಮದತ್ತನ ಪತ್ನಿಯಾದಳು. ಅಂದೇ ಪಟ್ಟಣಿಗರ ಅನುಮತಿಯನ್ನು ಪಡೆದು ರಾಜನು ಸೋಮದತ್ತನನ್ನು ಯೌವ ರಾಜ್ಯದಲ್ಲಿ ಅಭಿಷೇಕಿಸಿದನು.

ಇಷ್ಟು ದಿನಗಳಾದರೂ ರಾಜವಾಹನನ ಸುಳಿವು ತಿಳಿಯಲಿಲ್ಲ. ಸೋಮ ದತ್ತನ ಮನಸ್ಸಿನಲ್ಲಿ ಈ ಕೊರಗು ಮನೆಮಾಡಿಕೊಂಡೇ ಇತ್ತು. ಅರಮನೆಯ ಸುಖಗಳ ಮಧ್ಯೆ ಒಮ್ಮೊಮ್ಮೆ ಅವನು ಗೆಳೆಯನಿಗಾಗಿ ದುಃಖಿಸುತ್ತಿದ್ದನು. "ಗೆಳೆಯನಿಲ್ಲದ ಈ ಸುಖವನ್ನು ಸುಡು" ಎಂದು ಎಷ್ಟೋ ಸಲ ಧಿಕ್ಕರಿಸು ತ್ತಿದ್ದನು. ನಿಷ್ಕಲ್ಮಷವಾದ ಸ್ನೇಹವು ಬಹುಕಾಲ ಅಗಲುವಿಕೆಯನ್ನು ಸಹಿಸದು. ಹೇಗಾದರೂ ಮಾಡಿ ಗೆಳೆಯನ ಮುಖವನ್ನು ನೋಡಲೇ ಬೇಕೆಂದು ಬಯಸಿ ಸಮೀಪದ ಸಿದ್ಧಾಶ್ರಮಕ್ಕೆ ಬಂದನು. ಅಲ್ಲಿದ್ದ ಸಿದ್ಧ ತಪಸ್ವಿಯೊಬ್ಬನಿಗೆ ವಿನಯದಿಂದ ನಮಸ್ಕರಿಸಿದನು. ಬಾಡಿದ ಮುಖದಿಂದ ಇದ್ದ ಈ ತರುಣನ ಮನಸ್ಸಿನ ಬೇಗೆಯೇನೆಂದು ಸಿದ್ಧನು ಪ್ರಶ್ನಿಸಿದನು. "ನನ್ನ ಸ್ನೇಹಿತನನ್ನು ಕಾಣುವ ಕಾಲವಾವುದು? ಎಲ್ಲಿ ಕಾಣುವೆನು?

ಎಂಬುದನ್ನು ದಯೆಯಿಟ್ಟು ತಿಳಿಸಬೇಕು” ಎಂದು ಆ ತರುಣನು ವಿನಯ ದಿಂದ ವಿಜ್ಞಾಪಿಸಿಕೊಂಡನು. ಸಿದ್ಧಪುರುಷನು ಸ್ವಲ್ಪಹೊತ್ತು ಆಲೋಚಿಸಿ “ ಮಹಾಕಾಲಕ್ಷೇತ್ರದಲ್ಲಿ ವಾಸಿಸುವ ಪರಮೇಶ್ವರನ ಉತ್ಸವವಾಗುವುದಲ್ಲವೇ! ಅಲ್ಲಿಗೆ ನೀನು ಹೋಗು. ಆಗ ನಿನ್ನ ಗೆಳೆಯನೂ ಅಲ್ಲಿಗೆ ಬರುವನು” ಎಂದು ತಿಳಿಸಿದನು.

ಉತ್ಸವವನ್ನು ನೋಡಲು ಹೊರಟ ಆ ತರುಣನನ್ನು ವಾಮ ಲೋಚನೆಯು ದಾದಿಯರೊಡನೆ ಹಿಂಬಾಲಿಸಿದಳು. ಎಲ್ಲರೂ ಮಹಾಕಾಲ ಕ್ಷೇತ್ರದ ಸಮೀಪಕ್ಕೆ ಬಂದರು. ಸಮೀಪದ ಉದ್ಯಾನದಲ್ಲಿ ಇಳಿದರು. ಅಲ್ಲಿದ್ದ ಉಯ್ಯಾಲೆಯೊಂದರಲ್ಲಿ ಆ ತರುಣನು ತರುಣಿಯರೊಡನೆ ತೂಗಾ ಡುತ್ತಾ ನಲಿಯುತ್ತಿದ್ದನು. ಆಗ ಆ ತರುಣನ ಕಣ್ಣಿಗೆ ರಾಜವಾಹನನ ಸುಂದರ ರೂಪು ಕಾಣಿಸಿತು. ಮಾತಂಗನಿಂದ ಬೀಳ್ಕೊಂಡ ರಾಜವಾಹನನು ಗೆಳೆಯರನ್ನು ಹುಡುಕಿಕೊಂಡು ತಿರುಗಾಡುತ್ತಾ ಮಹಾಕಾಲೇಶ್ವರನ ಉತ್ಸವ ದಲ್ಲಿ ಯಾರಾದರೂ ಸಿಗಬಹುದೆಂದು ಆ ಉತ್ಸವಕ್ಕೆ ಬರುತ್ತಿದ್ದನು. ಗೆಳೆಯ ನನ್ನು ಕಂಡಕೂಡಲೆ ಸಂತೋಷಪಟ್ಟ ತರುಣನು ಉಯ್ಯಾಲೆಯಿಂದಿಳಿದು ಓಡಿಬಂದು ರಾಜಪುತ್ರನ ಕಾಲ ಮೇಲೆ ತಲೆಯನ್ನಿಟ್ಟು ನಮಸ್ಕರಿಸಿದನು. ಇಬ್ಬರ ಕಣ್ಣುಗಳನ್ನೂ ನೀರು ತುಂಬಿತು. ಗೆಳೆಯರಿಬ್ಬರೂ ಗಾಢವಾಗಿ ಅಪ್ಪಿಕೊಂಡರು. ಅಲ್ಲಿದ್ದ ಸುರಹೊನ್ನೆ ಮರದ ಕೆಳಗೆ ಕುಳಿತು ತಮ್ಮ ತಮ್ಮ ಕತೆಗಳನ್ನು ಹೇಳಿಕೊಂಡರು.

# ಅರ್ಥಪಾಲ

## ೧

ಕುಸುಮ ಪುರದರಸನಾದ ರಿಪುಂಜಯನ ಬಳಿ ಧರ್ಮಪಾಲನೆಂಬ ಮಂತ್ರಿಯಿದ್ದನು. ಅವನಿಗೆ ಇಬ್ಬರು ಹೆಂಡತಿಯರು. ಒಬ್ಬಳಿಗೆ ಸುಮಿತ್ರನೆಂಬ ಮಗನೂ ಮತ್ತೊಬ್ಬಳಿಗೆ ಕಾಮಪಾಲನೆಂಬ ಮಗನೂ ಹುಟ್ಟಿದರು. ಕಾಮಪಾಲನು ಅವಿನೀತನಾಗಿ ವೇಶ್ಯಾಲಂಪಟನಾಗಿದ್ದನು. ಇದು ಸುಮಿತ್ರನಿಗೆ ಸರಿಬೀಳಲಿಲ್ಲ. ಎಷ್ಟೋ ಸಲ ಅವನು ತಮ್ಮನನ್ನು ಈ ದುರ್ನಡತೆಯಿಂದ ತಪ್ಪಿಸಲು ಪ್ರಯತ್ನಿಸಿದನು. ಆದರೂ ಅವಿಧೇಯನಾದ ಕಾಮಪಾಲನು ಅಣ್ಣನ ಬುದ್ಧಿವಾದಕ್ಕೆ ಕಿವಿಗೊಡಲಿಲ್ಲ. ಕೊನೆಗೆ ಅಣ್ಣನ ಮನೆಯನ್ನೇ ಬಿಟ್ಟು ಹೊರಟು ದೇಶಗಳನ್ನು ಸುತ್ತುತ್ತ ವಾರಾಣಸಿಗೆ ಬಂದನು. ಅಲ್ಲಿ ಉದ್ಯಾನವನದಲ್ಲಿ ಈಶ್ವರನನ್ನು ಸೇವಿಸಲು ಗೆಳತಿಯರೊಂದಿಗೆ ಕಾಶೀ ರಾಜನ ಮಗಳಾದ ಕಾಂತಿಮತಿಯು ಬಂದಿದ್ದಳು. ಅವಳು ಉದ್ಯಾನವನಕ್ಕೆ ಬಂದಿದ್ದ ತರುಣನನ್ನು ನೋಡಿ ಮೋಹಗೊಂಡಳು. ಇವರಿಬ್ಬರಿಗೂ ಉಂಟಾದ ಪ್ರೇಮದ ಫಲವಾಗಿ ಕಾಮಪಾಲನಿಗೆ ಅಂತಃಪುರ ಪ್ರವೇಶವು ದೊರೆಯಿತು. ಕೆಲವು ದಿನಗಳಲ್ಲಿಯೇ ಕಾಂತಿಮತಿಯು ಗರ್ಭಿಣಿಯಾಗಿ ಒಂದು ಗಂಡು ಮಗುವನ್ನು ಹೆತ್ತಳು. ಅಂತರಂಗ ಪ್ರೇಮವು ಬಯಲಿಗೆ ಬರುವುದೆಂದು ಹೆದರಿ ಕಾಂತಿಮತಿಯು ಪರಿವಾರದವಳೊಬ್ಬಳನ್ನು ಕರೆದು ಆ ಬಾಲಕನನ್ನು ಕ್ರೀಡಾಪರ್ವತದ ಬಳಿ ಇಟ್ಟು ಬಂದು ಬಿಡುವಂತೆ ಅಪ್ಪಣೆ ಮಾಡಿದಳು. ಅಪ್ಪಣೆಯಂತೆ ಪರಿವಾರದವಳು ಅಲ್ಲಿ ಮಗುವನ್ನು ಬಿಟ್ಟು ಬಂದಕೂಡಲೆ ಮೊದಲೇ ಮಾಡಿದ್ದ ಸಂಕೇತದಂತೆ ಜೇಡಿತಿಯೊಬ್ಬಳು ಬಂದು ಆ ಮಗುವನ್ನು ಎತ್ತಿಕೊಂಡು ಸ್ಮಶಾನಕ್ಕೆ ಹೋದಳು. ಅಳುತ್ತಿದ್ದ ಆ ಮಗುವನ್ನು ಅಲ್ಲಿಯೇ ಬಿಟ್ಟು ಹಿಂತಿರುಗಿ ಬರುತ್ತಾ ಆ ಜೇಡತಿಯು ನಡುರಾತ್ರಿಯಲ್ಲಿ ನಗರ ರಕ್ಷಕರ ಕೈಗೆ ಸಿಕ್ಕಿಬಿದ್ದಳು. ಈ ಅವೇಳೆಯಲ್ಲಿ ಒಬ್ಬಳೇ

ಬರುತ್ತಿದ್ದುದರಿಂದ ಅವರಿಗೆ ಸಂದೇಹ ಬಂತು. ಅವರು ಅವಳನ್ನು ಹೆದರಿಸಿದರು. ಶಿಕ್ಷೆಗೆಲ್ಲಿ ಗುರಿಯಾಗಬೇಕಾಗುವುದೋ ಎಂಬ ಭಯದಿಂದ ಅವಳು ಇದ್ದ ವಿಷಯವನ್ನು ಮರೆಮಾಚದೆ ತಿಳಿಸಿಬಿಟ್ಟಳು.

ಅಂತಃಪುರ ದೂಷಕನಾದ ಆ ತರುಣನನ್ನು ಹುಡುಕಲು ಆ ಜೇಡಿತಿಯನ್ನೂ ಕರೆದುಕೊಂಡು ನಗರ ರಕ್ಷಕರು ಉದ್ಯಾನವನದ ಕಡೆಗೆ ಬಂದರು. ಉದ್ಯಾನವನದ ಕ್ರೀಡಾಪರ್ವತದ ಗುಹೆಯಲ್ಲಿ ಗಾಢವಾಗಿ ನಿದ್ರಿಸುತ್ತಿದ್ದ ಕಾಮಪಾಲನನ್ನು ತೋರಿಸಿ ಆ ಜೇಡಿತಿಯು "ಇವನೇ ರಾಜಪುತ್ರಿಯ ಪ್ರಿಯನು" ಎಂದಳು. ಕೂಡಲೆ ಅಧಿಕಾರಿಗಳು ಅವನ ಕೈಗಳನ್ನು ಕಟ್ಟಿ ರಾಜನಾದ ಚಂಡಸಿಂಹನ ಬಳಿಗೆ ಕರೆತಂದರು. ರಾಜನು ಅವನ ದುರ್ನಡತೆಗೆ ಕೋಪಗೊಂಡು ಏನನ್ನೂ ವಿಚಾರಿಸದೆ ಮಾರನೆಯ ದಿನವೇ ಅವನನ್ನು ಕೊಲ್ಲುವಂತೆ ಅಪ್ಪಣೆಮಾಡಿದನು.

ರಾಜನ ಅಪ್ಪಣೆಯಂತೆ ಮಾರನೆಯ ದಿನ ಬೆಳಗ್ಗೆ ಸ್ಮಶಾನದಲ್ಲಿ ಕಾಮಪಾಲನ ವಧೆಗೆ ಸಿದ್ಧತೆಗಳಾದುವು. ಚಂಡಾಲನೊಬ್ಬನು ಕತ್ತಿಯನ್ನು ಮಸೆಯುತ್ತ ಕುಳಿತಿದ್ದನು. ರಕ್ಷಣಾಧಿಕಾರಿಗಳು ಕೈಗಳನ್ನು ಕಟ್ಟಿ ಅಪರಾಧಿಯನ್ನು ಕರೆತಂದರು. ಇಂದಿಗೆ ತನ್ನ ಆಯುಸ್ಸು ತೀರಿತೆಂದು ತಿಳಿದ ಕಾಮಪಾಲನು ಏನೂ ತೋರದೆ ಸುಮ್ಮನಿದ್ದನು. ಸ್ವಲ್ಪ ಹೊತ್ತಿನ ಮೇಲೆ ಹಿಂದಿನಿಂದಲೇ ತನ್ನ ಕೈಕಟ್ಟನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದನು. ತನ್ನ ಪ್ರಯತ್ನವು ವ್ಯರ್ಥವಾಗುವುದೆಂದೇ ಅವನು ತಿಳಿದಿದ್ದನು. ಆದರೆ ಅವನ ಆಶ್ಚರ್ಯಕ್ಕೆ ತಕ್ಕಂತೆ ಕೈಗೆ ಕಟ್ಟಿದ್ದ ಹಗ್ಗವು ಕಡಿದುಹೋಯಿತು. ಕೈಗಳು ಸ್ವತಂತ್ರವಾದ ಕೂಡಲೆ ಅವನು ಆ ಕಟುಕನ ಕೈಯಲ್ಲಿದ್ದ ಕತ್ತಿಯನ್ನು ಹಠಾತ್ತನೆ ಕಸಿದುಕೊಂಡು ಮೊದಲು ಆ ಕಟುಕನನ್ನೂ ಅನಂತರ ರಕ್ಷಣಾಧಿಕಾರಿಗಳನ್ನೂ ಕೊಂದು ಅಲ್ಲಿಂದ ಓಡಿಹೋದನು.

ಯಕ್ಷರ ಅಧಿಪತಿಯಾದ ಮಣಿಭದ್ರನೆಂಬನೊಬ್ಬನುಂಟು. ಅವನಿಗೆ ಅನುಪಮ ಲಾವಣ್ಯವತಿಯಾದ ಒಬ್ಬಳು ಮಗಳು. ಅವಳ ಹೆಸರು ತಾರಾವಳಿ. ಮೊದಲೇ ಸುಂದರಿಯಾಗಿದ್ದ ಯಕ್ಷಕನ್ಯೆ ಯವ್ವನದಿಂದ ಮತ್ತಷ್ಟು ಸುಂದರಿಯಾಗಿದ್ದಳು ತನಗೆ ತಕ್ಕ ವರನು ದೊರೆಯಬೇಕೆಂದು ಅವಳು ಅಗಸ್ತ್ಯಮಹರ್ಷಿಗಳ ಪತ್ನಿ ಲೋಪಾಮುದ್ರಾದೇವಿಯನ್ನು ಆರಾಧಿಸು

ತ್ತಿದ್ದಳು. ಅಂದು ಲೋಪಾಮುದ್ರೆಗೆ ನಮಸ್ಕಾರ ಮಾಡಿ ಹಿಂತಿರುಗಿಬರುತ್ತಾ ದಾರಿಯಲ್ಲಿ ಕಾಶೀನಗರದ ಸ್ಮಶಾನಕ್ಕೆ ಬಂದಳು. ನಡುರಾತ್ರಿ. ಎಲ್ಲಿ ನೋಡಿದರೂ ಕತ್ತಲೆ ಕವಿದಿತ್ತು. ನಿರ್ಜನವಾದ ಆ ಭಯಂಕರ ಪ್ರದೇಶದಲ್ಲಿ ಮಗು ಅಳುತ್ತಿದ್ದ ಶಬ್ದವು ಅವಳ ಕಿವಿಗೆ ಬಿತ್ತು. "ಏನಿದು! ಯಾವುದೋ ಮಗು ಅಳುತ್ತಿದ್ದಂತೆ ಇದೆ. ಇಲ್ಲಿ ಮಗುವಾದರೂ ಬರಲು ಕಾರಣವೇನು?" ಎಂದು ಕುತೂಹಲದಿಂದ ಮಗುವಿನ ಸಮೀಪಕ್ಕೆ ಬಂದಳು. ತನ್ನ ಶರೀರದ ಬೆಳಕಿನಲ್ಲಿ ಮಗುವಿನ ಸೌಂದರ್ಯವನ್ನು ಕಂಡು ವಿಸ್ಮಿತಳಾದಳು. ಅವಳ ಮನಸ್ಸಿನಲ್ಲಿ ಏನೋ ಒಂದು ಬಗೆಯ ಸ್ನೇಹವು ಮೊಳೆಯಿತು. ಆ ಮಗುವನ್ನು ಅಲ್ಲಿಯೇ ಬಿಟ್ಟು ಹೋಗಲು ಅವಳಿಗೆ ಮನಸ್ಸು ಬರಲಿಲ್ಲ. ಅಳುತ್ತಿದ್ದ ಮಗುವನ್ನು ಎತ್ತಿಕೊಂಡು ತನ್ನ ತಂದೆತಾಯಿಗಳ ಸಮೀಪಕ್ಕೆ ಬಂದಳು. ಅಕಸ್ಮಾತ್ತಾಗಿ ದೊರೆತ ಆ ಮಗುವಿನ ಸಲ್ಲಕ್ಷಣಗಳನ್ನು ಕಂಡ ಮಣಿಭದ್ರನು ಹಿಗ್ಗಿ ಆ ಮಗುವಿನ ಹುಟ್ಟಿನ ಗುಟ್ಟನ್ನು ತಿಳಿಯಬೇಕೆಂದು ಮಗುವನ್ನು ಯಕ್ಷರಾಜನಾದ ಕುಬೇರನ ಆಸ್ಥಾನಕ್ಕೆ ಕರೆತಂದನು.

ಕುಬೇರನು ತಾರಾವಳಿಯನ್ನೂ ಆಸ್ಥಾನಕ್ಕೆ ಕರೆಯಿಸಿದನು. ಅವನ ಮುಖದಲ್ಲಿ ಮುಗುಳುನಗೆ ಮಿನುಗುತ್ತಿತ್ತು. ಆ ಮಗುವಿನ ಆದ್ಯಂತ ಚರಿತ್ರೆಯನ್ನು ಬಲ್ಲವನಂತೆ ಅವನು ಸುತ್ತಲಿದ್ದ ಯಕ್ಷರ ಮುಖಗಳನ್ನು ನೋಡಿದನು. ಒಮ್ಮೆ ತಾರಾವಳಿಯನ್ನು ನೋಡಿ 'ಹುಡುಗಿ, ಈ ಮಗುವಿನ ವಿಷಯದಲ್ಲಿ ನಿನ್ನ ಮನೋಭಾವವೇನು?' ಎಂದನು. ತ್ರಿಕಾಲಜ್ಞನಾದ ಅವನಲ್ಲಿ ತನ್ನ ಭಾವವನ್ನು ಮರೆಮಾಚಲು ಯಕ್ಷಕನ್ಯೆಗೆ ಆಗಲಿಲ್ಲ. ಇದ್ದುದನ್ನು ಇದ್ದಂತೆ ತಿಳಿಸಿಬಿಟ್ಟಳು. "ಈ ಮಗುವಿನಲ್ಲಿ ನನ್ನ ಸ್ವಂತ ಮಗುವಿನಲ್ಲಿ ಮಾಡುವ ಪ್ರೀತಿಯು ಮೂಡಿದೆ" ಎಂದವಳು ನಾಚಿಕೆಯಿಂದ ತಲೆತಗ್ಗಿಸಿ ನುಡಿದಳು. ಕುಬೇರನು ಸಭೆಯನ್ನು ನೋಡಿ ನಗುತ್ತ 'ಈ ತಪಸ್ವಿನಿಯು ನಿಜವಾದ ಸಂಗತಿಯನ್ನು ಹೇಳಿದಳು. ಈ ಮಗುವು ಇವಳದೇ." ಎಂದನು. ಎಲ್ಲರಿಗೂ ಆಶ್ಚರ್ಯವಾಯಿತು.

'ಹಿಂದೆ ಶೂದ್ರಕನೆಂಬ ಒಬ್ಬ ರಾಜನಿದ್ದನು. ಅವನ ಹೆಂಡತಿಯರಲ್ಲಿ ಆರ್ಯದಾಸಿ ಯೆಂಬುವಳು ಒಂದು ಮಗುವನ್ನು ಹೆತ್ತಳು. ವಿನಯವತಿಯೆಂಬ ಮತ್ತೊಬ್ಬಳು. ಪ್ರೇಮಾತಿಶಯದಿಂದ ಆ ಮಗುವನ್ನು ಪೋಷಿಸಿ

ದಳು. ಅದೇ ಶೂದ್ರಕನೇ ಕಾಮಪಾಲನಾಗಿ ಜನ್ಮವೆತ್ತಿದ್ದಾನೆ. ಆ ವಿನಯವತಿಯೇ ಕಾಂತಿಮತಿಯಾಗಿ ಕಾಶೀರಾಜನಾದ ಚಂಡಸಿಂಹನ ಮಗಳಾಗಿದ್ದಾಳೆ. ಕಾಂತಿಮತಿಯ ಈ ಮಗುವು ಆರ್ಯದಾಸಿಯ ಮಗುವಿನ ಮರುಹುಟ್ಟು. ಆ ಆರ್ಯದಾಸಿಯೇ ಈ ತಾರಾವಳಿ' ಯೆಂದು ಹಿಂದಿನ ಕತೆಯನ್ನು ಕುಬೇರನು ತಿಳಿಸಿ ಸಭಿಕರೆಲ್ಲರ ಆಶ್ಚರ್ಯವನ್ನು ಪರಿಹರಿಸಿದನು.

ಮಗುವಿನ ವಿಷಯದಲ್ಲಿ ತನಗುಂಟಾಗಿದ್ದ ಔರಸ ಪ್ರೇಮದ ಕಾರಣವನ್ನು ತಿಳಿದಮೇಲೆ ಆ ಯಕ್ಷಿಯು ತನ್ನ ಪತಿಯಾದ ಕಾಮಪಾಲನನ್ನು ಸೇರಬೇಕೆಂದು ಬಯಸಿದಳು. ಆ ಮಗುವನ್ನು ಕೆಲವುಕಾಲ ಯಕ್ಷಲೋಕದಲ್ಲೇ ಬೆಳೆಸಿದಳು. ಕುಬೇರನು ಮತ್ತೊಂದುದಿನ ತಾರಾವಳಿಯನ್ನು ಕುರಿತು 'ತಾರಾವಳಿ! ಈ ಬಾಲಕನನ್ನು ಕರೆದುಕೊಂಡು ಹೋಗಿ ವಾಮದೇವ ಮಹರ್ಷಿಯಾಶ್ರಮದಲ್ಲಿ ತಪಸ್ಸು ಮಾಡುತ್ತಿರುವ ರಾಜಹಂಸನ ಹೆಂಡತಿ ವಸುಮತಿಗೆ ಒಪ್ಪಿಸಿ ಬಾ. ಮುಂದೆ ಚಕ್ರವರ್ತಿಯಾಗುವ ಅವಳ ಮಗನ ಗೆಳೆಯನಾಗಿರಲಿ. ನಿನಗೂ ನಿನ್ನ ನಲ್ಲನ ಸಮಾಗಮವಾಗುವುದು" ಎಂದನು.

ಸಂತೋಷದಿಂದ ಉಬ್ಬಿದ ತಾರಾವಳಿಯು ಕೂಡಲೆ ಬಾಲಕನನ್ನು ಎತ್ತಿಕೊಂಡು ವಾಮದೇವ ಮಹರ್ಷಿಯಾಶ್ರಮಕ್ಕೆ ಬಂದಳು. ತಿರಸ್ಕರಿಣೀ ವಿದ್ಯೆಯನ್ನು ಬಲ್ಲ ಅವಳಿಗೆ ವಸುಮತಿಯ ಅಂತಃಪುರವನ್ನು ಪ್ರವೇಶಿಸುವುದು ಕಷ್ಟವಾಗಿರಲಿಲ್ಲ. ಆ ದಿವ್ಯಸ್ತ್ರೀಯು ತನ್ನ ಕಾಂತಿಯಿಂದ ಅಂತಃಪುರವನ್ನೇ ಬೆಳಗುತ್ತಾ ನಿದ್ರಿಸುತ್ತಿದ್ದ ವಸುಮತಿಯನ್ನು ನಿದ್ದೆಯಿಂದ ಎಚ್ಚರಿಸಿದಳು. ಮಹಾರಾಣಿಯು ಎದ್ದವಳೇ ಆ ತೇಜಸ್ಸಿಗೆ ಬೆರಗಾದಳು. ಬೆರಗುವಡೆದ ವಸುಮತಿಯನ್ನು ನೋಡಿ ವಿನಯದಿಂದ "ದೇವಿ, ಈ ಬಾಲಕನನ್ನು ನೋಡು. ಇವನು ಮಂತ್ರಿಯಾದ ಧರ್ಮಪಾಲನ ಮಗ ಕಾಮಪಾಲನ ಪುತ್ರನು. ನಾನು ಕಾಮಪಾಲನ ಹೆಂಡತಿಯಾದ ಯಕ್ಷಕನ್ಯೆ ತಾರಾವಳಿ. ಮಣಿಭದ್ರನೆಂಬ ಯಕ್ಷನ ಮಗಳು. ಕುಬೇರನ ಆಜ್ಞೆಯಂತೆ ಮುಂದೆ ಚಕ್ರವರ್ತಿಯಾಗುವ ನಿನ್ನ ಮಗನ ಪರಿಚರ್ಯೆಗಾಗಿ ಇವನನ್ನು ಒಪ್ಪಿಸಿಕೊಡಲು ಬಂದಿದ್ದೇನೆ. ಇವನನ್ನು ಸ್ವೀಕರಿಸಿ ನೀನೇ ಪೋಷಿಸು" ಎಂದು ವಿಜ್ಞಾಪಿಸಿ

ದಳು. ವಸುಮತಿಯ ಕಣ್ಣುಗಳು ಆಶ್ಚರ್ಯದಿಂದ ಅರಳಿದುವು. ಅವಳು ಯಕ್ಷಿಯನ್ನು ಸತ್ಕರಿಸಿ ಏನನ್ನೋ ಕೇಳಬೇಕೆಂದಿದ್ದಳು. ಅಷ್ಟರಲ್ಲಿ ಯಕ್ಷಿಯು ಅದೃಶ್ಯಳಾದ್ದರಿಂದ ಹೆಚ್ಚು ವಿಷಯಗಳೇನೂ ತಿಳಿಯಲಾಗಲಿಲ್ಲ. ಬೆಳಗಾದ ಮೇಲೆ ರಾಣಿಯು ರಾಜನಾದ ರಾಜಹಂಸನ ಬಳಿಗೆ ಆ ಕುಮಾರನನ್ನು ಕರೆದು ಕೊಂಡು ಬಂದು ರಾತ್ರಿ ನಡೆದ ಸಮಾಚಾರವೆಲ್ಲವನ್ನೂ ತಿಳಿಸಿದಳು. ಕಾಮ ಪಾಲನಿಗೆ ಯಕ್ಷಕನ್ಯೆಯೊಡನೆ ಆದ ಸಂಗಮವನ್ನು ಕೇಳಿ ವಿಸ್ಮಿತನಾದ ರಾಜನು ಸುಮಿತ್ರನನ್ನು ಕರೆಯಿಸಿ "ನಿನ್ನ ತಮ್ಮನ ಮಗನಿವನು. ಇವನಿಗೆ ಅರ್ಥಪಾಲನೆಂದು ಹೆಸರಿಟ್ಟಿದ್ದೇನೆ. ಇವನನ್ನು ಕಾಪಾಡು" ಎಂದು ಹೇಳಿ ಆ ಹುಡುಗನನ್ನು ಅವನಿಗೆ ಒಪ್ಪಿಸಿ ಸಕಲ ವೃತ್ತಾಂತವನ್ನೂ ವಿವರಿಸಿದನು.

ಅರ್ಥಪಾಲನು ರಾಜಪುತ್ರನೊಂದಿಗೆ ಬೆಳೆದು ಅವನ ಗೆಳೆಯ ರಲ್ಲೊಬ್ಬನಾದನು.

೨

ಸ್ಮಶಾನದಿಂದ ತಪ್ಪಿಸಿಕೊಂಡು ಹೊರಟ ಕಾಮಪಾಲನು ಅಲ್ಲಿ ಇಲ್ಲಿ ಅಲೆದಾಡುತ್ತ ಎಲ್ಲೂ ಆಶ್ರಯವು ಸಿಗದೆ ಪರಿತಪಿಸುತ್ತಿದ್ದನು. ಗೊಂಡಾರಣ್ಯ ವನ್ನು ಹೊಕ್ಕ ಅವನಿಗೆ ಹೊಲಬು ತೋರಲಿಲ್ಲ. ಮುಂದಕ್ಕೆ ಹೋಗಲಾರದೆ ಅಲ್ಲಿಯೇ ಒಂದು ಗಿಡದ ಬುಡದಲ್ಲಿ ಕುಳಿತಿದ್ದನು. ಅವನ ಮನಸ್ಸಿನಲ್ಲಿ ಏನೇನೋ ಆಲೋಚನೆಗಳು ಮೂಡಿ ಮಾಯವಾಗುತ್ತಿದ್ದುವು. ಚಂಡ ಸಿಂಹನು ಅವಿಚಾರವಾಗಿ ಕೊಟ್ಟ ತೀರ್ಪಿಗೆ ತಕ್ಕ ಪ್ರತೀಕಾರವನ್ನು ಮಾಡ ಬೇಕೆಂಬುದೊಂದು ; ಪ್ರಿಯತಮೆಯಾದ ಕಾಂತಿಮತಿಯನ್ನು ಸೇರಿ ಸುಖಿಸ ಬೇಕೆಂಬುದೊಂದು : ಹೀಗೆ ಇಬ್ಬಗೆಯಾದ ಉದ್ವೇಗದಲ್ಲಿ ಬೇಯುತ್ತಿದ್ದ ಅವನ ಮನಸ್ಸಿಗೆ ಎಲ್ಲಿ ಕುಳಿತರೂ ಶಾಂತಿಯಿರಲಿಲ್ಲ. ಯಾರಾದರೂ ತನ್ನ ಸಹಾ ಯಕ್ಕೆ ಒದಗುವರೇ ಎಂದವನು ಹಾರೈಸುತ್ತಿದ್ದನು. ಆ ಘೋರಾಡವಿಯಲ್ಲಿ ಸಹಾಯಕರು ದೊರೆವುದೆಂತು ?

ತಲೆತಗ್ಗಿಸಿ ಕುಳಿತಿದ್ದ ಕಾಮಪಾಲನು ಕಾರಣಾಂತರದಿಂದ ತಲೆಯೆತ್ತಿ ನೋಡಿದನು. ಮುಂದೊಬ್ಬ ಯಕ್ಷಕನ್ಯೆಯು ಪರಿವಾರದೊಂದಿಗೆ ನಿಂತಿದ್ದಳು.

ಅವಳ ಒಳ್ಗದಪಿನಲ್ಲಿ ಕಣ್ಣೀರಿನ ಹನಿಗಳು ಸ್ವಲ್ಪಕಾಲ ನಿಂತು ಕೆಳಗೆ ಜಾರು ತಿದ್ದುವು. ದೇವಲೋಕ ಸುಂದರಿಯಂತಿದ್ದ ಅವಳ ದುಃಖಕ್ಕೆ ಕಾರಣವೇ ನೆಂದು ಕಾಮಪಾಲನು ತಿಳಿಯಲಾಗಲಿಲ್ಲ. ಆ ಯಕ್ಷತರುಣಿಯು ಏಕಾಕಿ ಯಾಗಿ ಗಿಡದ ಬುಡದಲ್ಲಿ ಕುಳಿತಿದ್ದ ಆ ಕಾಮಪಾಲನನ್ನೇ ದಿಟ್ಟಿಸಿ ನೋಡು ತ್ತಿದ್ದಳು. ಅವಳ ದುಂಡು ಮೊಗದಲ್ಲಿ ಕಿರುನಗೆಯು ಮಿನುಗಿತು. ತನ್ನ ನಲ್ಲನೆಂದು ಅವಳಿಗೆ ತಿಳಿದಿದ್ದಿರಬೇಕು! ಅದರಿಂದಲೇ ಅವಳು ತನ್ನ ಕೈಗಳನ್ನು ಜೋಡಿಸಿ ತಲೆತಗ್ಗಿಸಿ ನಮಸ್ಕಾರ ಮಾಡಿದಳು. ಇಳಿಬಿದ್ದ ಮುಂಗೂದಲುಗಳು ಅವಳ ಮುಖವನ್ನು ಮುಚ್ಚಿದ್ದುವು. ಆ ವಯಸ್ಕನಿಗೆ ಏನೊಂದು ತೋರದೆ ಅವಳನ್ನು ಅಲ್ಲಿಯೇ ಗಿಡದ ಕೆಳಗೆ ಕುಳಿತುಕೊಳ್ಳುವಂತೆ ಸನ್ನೆಮಾಡಿದನು. ಆ ತರುಣಿಯು ತಾನು ಕುಳಿತು ತನ್ನ ಗೆಳತಿಯನ್ನೂ ಕುಳಿತುಕೊಳ್ಳುವಂತೆ ಹೇಳಿದಳು.

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಕಾಮಪಾಲನ ಕುತೂ ಹಲವು ಹೆಚ್ಚುತ್ತ ಬಂದು "ಬಾಲೆ! ನೀನು ಯಾರು? ನೀನು ಬಂದು ದೆಲ್ಲಿಂದ? ನನ್ನಲ್ಲಿ ನೀನು ಪ್ರಸನ್ನಳಾಗಲು ಕಾರಣವೇನು?" ಎಂದು ಗಂಭೀರವಾಗಿ ಅವನೇ ಪ್ರಶ್ನೆಮಾಡಿದನು. ಆ ದಿವ್ಯಸುಂದರಿಯ ಮನಸ್ಸು ಆನಂದದಿಂದ ಹಿಡಿಸದಾಯಿತು. ಅವಳು ತನ್ನ ಗೆಳತಿಯ ಕಡೆ ನೋಡಿ ಮುಗುಳುನಗೆ ನಕ್ಕು ಮಾತನಾಡತೊಡಗಿದಳು. "ನಾಥ! ನಾನು ನಿನ್ನ ಹಿಂದಿನ ಜನ್ಮದ ಹೆಂಡತಿ ತಾರಾವಳಿ. ನಾನೀಗ ಮಣಿಭದ್ರನೆಂಬ ಯಕ್ಷನ ಮಗಳಾಗಿದ್ದೇನೆ. ಸ್ಮಶಾನದಲ್ಲಿ ದೊರೆತ ನಿನ್ನ ಮಗುವನ್ನು ಕೆಲವು ಕಾಲ ಸಲಹಿ ಈಗತಾನೇ ರಾಜಹಂಸನ ಮಹಿಷಿಯಾದ ವಸುಮತಿಗೆ ಒಪ್ಪಿಸಿ ಬಂದಿ ದ್ದೇನೆ. ಕುಬೇರನ ಅಪ್ಪಣೆಯಂತೆ ನಿನ್ನನ್ನು ಸೇರಬಯಸಿ ಈ ವನಕ್ಕೆ ಬಂದೆ. ನಿನ್ನ ಸಮಾಗಮ ಸುಖವನ್ನು ಅನುಭವಿಸುತ್ತಿದ್ದೇನೆ." ಎಂದು ಸಂಕ್ಷೇಪವಾಗಿ ಎಲ್ಲ ವಿಷಯಗಳನ್ನೂ ಹೇಳಿದಳು. ಕಾಮಪಾಲನ ಕಣ್ಣು ಗಳಿಂದ ಆನಂದದ ನೀರು ತೊಟ್ಟಿಕ್ಕಿತು. ಅನೇಕ ಹುಟ್ಟುಗಳಲ್ಲಿ ವಲ್ಲಭೆ ಯಾಗಿದ್ದ ಆ ರಮಣೀಮಣಿಯನ್ನು ಕಂಡು ಹೊಂಪುಳಿಹೋದನು. ಮೃತ್ಯುವಿನ ದಾಡೆಯಿಂದ ತಪ್ಪಿಸಿಕೊಂಡು ಬಂದಿದ್ದ ಅವನಿಗೆ ಯಕ್ಷಕನ್ಯೆಯು ಲಾಭವಾಯಿತು. ಆ ಯಕ್ಷಿಯು ತನ್ನ ವಿದ್ಯಾಪ್ರಭಾವದಿಂದ ಒಂದು ದೊಡ್ಡ

ಉಪ್ಪರಿಗೆ ಮನೆಯನ್ನು ಸೃಷ್ಟಿಸಿದಳು. ಆ ಮಂದಿರದಲ್ಲಿ ಭೂಲೋಕದಲ್ಲಿ ಎಲ್ಲೂ ಅನುಭವಿಸಲಾಗದ ಎಲ್ಲ ವಿಧವಾದ ಸೌಕರ್ಯಗಳೂ ಸಮೃದ್ಧವಾಗಿದ್ದುವು. ಕಾಮಪಾಲನು ದಿವ್ಯಲೋಕ ಸುಂದರಿಯೊಡನೆ ದಿವ್ಯ ಸುಖಗಳನ್ನು ಅನುಭವಿಸುತ್ತಾ ಕೆಲವು ಕಾಲ ಕಳೆದನು.

ಅವನ ಮನಸ್ಸು ಮಾತ್ರ ಪ್ರತೀಕಾರವನ್ನೇ ಯೋಚಿಸುತ್ತಿತ್ತು. ಅವನೊಂದು ದಿನ ತನ್ನ ಪ್ರಿಯೆಯಾದ ತಾರಾವಳಿಯನ್ನು ಕುರಿತು "ಪ್ರಿಯೇ, ಈ ಯಾವ ದಿವ್ಯಸುಖವೂ ನನ್ನ ಮನಸ್ಸನ್ನು ಸೆಳೆಯುತ್ತಿಲ್ಲ. ನನಗಿರುವುದು ಒಂದೇ ಚಿಂತೆ. ಆ ನನ್ನ ಪ್ರಾಣದ್ರೋಹಿಯಾದ ಚಂಡಸಿಂಹನ ಮೇಲೆ ಸೇಡು ತೀರಿಸಿಕೊಳ್ಳದೆ ನನಗೆ ಸುಖವಿಲ್ಲ. ನೀನು ಯಕ್ಷಕನ್ಯೆ. ನಿನಗೆ ತಿರಸ್ಕರಿಣೀ ವಿದ್ಯೆಯ ಬಲವುಂಟು. ಆ ವಿದ್ಯೆಯಿಂದ ನೀನು ನನಗೆ ಸ್ವಲ್ಪ ಸಹಾಯ ಮಾಡು. ಆ ದ್ರೋಹಿಗೆ ತಕ್ಕ ಪ್ರತೀಕಾರವನ್ನು ಮಾಡಿ ನಾನು ಕೃತಕೃತ್ಯನಾಗುತ್ತೇನೆ" ಎಂದನು.

ಅವಳು ಮುಗುಳು ನಗೆ ನಕ್ಕಳು. ಅವಳು ಏನನ್ನೂ ಆಲೋಚಿಸದೆ ಕೂಡಲೆ "ಕಾಂತನೇ, ಬಾ. ಕಾಂತಿಮತಿಯನ್ನು ನಿನಗೆ ತೋರಿಸುತ್ತೇನೆ" ಎಂದಳು. ಕಾಮಪಾಲನ ಮುಖಕಮಲವು ಅರಳಿತು.

ಅರ್ಧರಾತ್ರಿ ಇರಬಹುದು. ತಿರಸ್ಕರಿಣೀ ವಿದ್ಯೆಯಿಂದ ಛನ್ನಳಾದ ಆ ಯಕ್ಷಿಣಿಯು ತನ್ನ ಕಾಂತನಾದ ಕಾಮಪಾಲನೊಂದಿಗೆ ಕಾಶೀರಾಜನ ಅರಮನೆಗೆ ಹೊರಟಳು. ಎಲ್ಲ ಕಾವಲುಗಾರರೂ ಮಲಗಿದ್ದರು. ಎಚ್ಚರವಿದ್ದ ಕೆಲವರ ಕಣ್ಣಿಗೆ ಇವಳಾಗಲೀ, ಇವಳ ಪ್ರಿಯನಾಗಲೀ ಕಾಣುತ್ತಿರಲಿಲ್ಲ. ಯಾವ ಆತಂಕವೂ ಇಲ್ಲದೆ ರಾಜನ ವಾಸಗೃಹಕ್ಕೆ ತನ್ನ ಕಾಂತನನ್ನು ಕರೆತಂದಳು. ಅಲ್ಲಿ ಚಿನ್ನದ ಮಂಚದಲ್ಲಿ ರಾಜನೊಬ್ಬನೇ ಮಲಗಿದ್ದನು. ಗಾಢ ನಿದ್ರೆಯಲ್ಲಿದ್ದ ಆ ಚಂಡಸಿಂಹನಿಗೆ ಇಹಲೋಕದ ಪರಿವೆಯೇ ಇರಲಿಲ್ಲ. ಅವನ ತಲೆದೆಸೆಯಲ್ಲಿ ಮಾತ್ರ ಒರೆಯಿಂದ ತೆಗೆದಿದ್ದ ಕತ್ತಿಯೊಂದು ಅಡ್ಡಲಾಗಿ ಬಿದ್ದಿದ್ದಿತು. ಆ ಶಯನಗೃಹದ ದೀಪವು ಅದರಲ್ಲಿ ಪ್ರಾಫಲಿಸುತ್ತಿತ್ತು. ಹರಿತವಾದ ಆ ಕತ್ತಿಯನ್ನು ಕಂಡ ಕಾಮಪಾಲನಿಗೆ ಧೈರ್ಯ ಇಮ್ಮಡಿಸಿತು. ಸದ್ದಿಲ್ಲದಂತೆ ಅದನ್ನು ತನ್ನ ಕೈಗೆ ತೆಗೆದುಕೊಂಡನು. ಆ ಕತ್ತಿಯ ಕೊನೆಯಿಂದ ಮಲಗಿ ನಿದ್ರಿಸುತ್ತಿದ್ದ ರಾಜನನ್ನು ಚುಚ್ಚಿದನು. ಕೊಲ್ಲಬೇಕೆಂದಲ್ಲ.

ಎಚ್ಚರಗೊಳಿಸಲೆಂದು. ಎಚ್ಚೆತ್ತ ರಾಜನು ಆ ದೀಪದ ಬೆಳಕಿನಲ್ಲಿ ನೋಡಿದನು. ಸಮೀಪದಲ್ಲೊಬ್ಬ ಎತ್ತರನಾದ ಪುರುಷನು ಕತ್ತಿಯನ್ನು ಕೈಯಲ್ಲಿ ಹಿಡಿದು ನಿಂತಿದ್ದನು. ಮುದಿರಾಜನ ಮನಸ್ಸಿನಲ್ಲಿ ಭಯವು ತಾನೇ ತಾನಾಗಿ ಮೈಯೆಲ್ಲ ನಡುಗಲಾರಂಭಿಸಿತು. ಗಂಟಲೊಣಗಿ ಮಾತು ಹೊರಡದಾಯಿತು. ನಟ್ಟದೃಷ್ಟಿಯಿಂದ ಆ ಪುರುಷನನ್ನೇ ನೋಡುತ್ತ ನಿಂತನು.

ವೃದ್ಧನ ಆ ಅವಸ್ಥೆಯನ್ನು ಕಂಡು ಕಾಮಪಾಲನ ಮನಸ್ಸು ಕರಗಿತೋ ಏನೋ? ಮೊದಲು ಅವನಲ್ಲಿ ಮೂಡಿದ್ದ ಪ್ರತೀಕಾರ ಭಾವನೆಯು ಮಾಯವಾಯಿತು. ಅವನು ವಿನೀತನಾದನು. ಸಮಾಧಾನದ ಮಾತುಗಳಿಂದ ರಾಜನನ್ನು ಸಂಬೋಧಿಸಿ "ನಾನು ನಿನ್ನ ಅಳಿಯ. ನನ್ನ ಹೆಸರು ಕಾಮಪಾಲನೆಂದು. ನಿನ್ನ ಅನುಮತಿಯಿಲ್ಲದೆ ನಿನ್ನ ಮಗಳನ್ನು ಸೇರಿದೆನು. ಆ ಕಾರಣದಿಂದ ನಾನು ನಿನಗೆ ಮಹಾಪರಾಧಿ. ಆ ಅಪರಾಧವನ್ನು ವಿಧೇಯತೆಯಿಂದ ಕಳೆದುಕೊಳ್ಳಬೇಕೆಂದು ಬಂದಿದ್ದೇನೆ" ಎಂದನು. ಕಂಗಳಲ್ಲಿ ದೊಣ್ಣೆ ಕೈಯಲ್ಲಿ ಶರಣಾರ್ತಿ ಎಂಬಂತೆ ಕತ್ತಿಯನ್ನು ಕೈಯಲ್ಲಿ ಹಿಡಿದು ಸಮಾಧಾನವಾಗಿ ಮಾತನ್ನಾಡುತ್ತಿದ್ದ ಕಾಮಪಾಲನನ್ನು ನೋಡಿ ರಾಜನಿಗೆ ಧೈರ್ಯ ಹುಟ್ಟಲಿಲ್ಲ. ಅದಕ್ಕೆ ಬದಲು ಭಯವು ಇಮ್ಮಡಿಸಿತು. ಚಿಕ್ಕವನೆಂದು ಕೂಡ ಅವನು ಬಗೆಯದೆ ಅಳಿಯನಿಗೆ ನಮಸ್ಕಾರಮಾಡಿ ಹೇಳಿದನು.

'ನಾನು ಮೂಢನು, ನೀನಲ್ಲ. ನಾನೇ ಅಪರಾಧಿ; ನೀನು ಮಹಾನುಭಾವನು. ನನ್ನ ಮಗಳನ್ನು ಪರಿಗ್ರಹಿಸಿ ನೀನು ನನ್ನಲ್ಲಿ ಅನುಗ್ರಹ ಮಾಡಿದೆ. ನಾನಾದರೋ ಪಿಶಾಚಿ ಹಿಡಿದವನಂತೆ ಏನೊಂದನ್ನೂ ವಿಚಾರಿಸದೆ ನಿನ್ನ ಕೊಲೆಗೆ ಅಪ್ಪಣೆಮಾಡಿದೆ. ಅದೆಲ್ಲವನ್ನೂ ಮರೆತುಬಿಡು. ಇಂದಿನಿಂದ ನನ್ನ ಮಗಳು ಕಾಂತಿಮತಿ, ನನ್ನ ಈ ರಾಜ್ಯ, ನನ್ನ ಬಾಳು—ಇವೆಲ್ಲವೂ ನಿನ್ನ ಅಧೀನ. ಸರ್ವವೂ ನಿನ್ನದು; ಎಂದು ಹೇಳುತ್ತ ಭಯದಿಂದ ನಡುಗುತ್ತಿದ್ದನು. ಕತ್ತಿಯನ್ನು ದೂರದಲ್ಲಿಟ್ಟು ಮಾವನಿಗೆ ನಮಸ್ಕರಿಸಿದನು ಕಾಮಪಾಲ. ಅಲ್ಲಿ ಇಬ್ಬರೂ ಸುಖವಾಗಿ ಉಷಃಕಾಲದವರೆಗೆ ನಿದ್ರಿಸಿದರು.

ಮಾರನೆಯದಿನ ರಾಜನ ಅಪ್ಪಣೆಯಂತೆ ಪಟ್ಟಣದ ಪ್ರಮುಖಜನರು ಆಸ್ಥಾನಕ್ಕೆ ಬರುತ್ತಿದ್ದರು. ಅಂದಿನ ಸಂರಂಭವೇನೆಂದು ಯಾರೊಬ್ಬರಿಗೂ

ತಿಳಿದಿರಲಿಲ್ಲ. ರಾಜಪುತ್ರನಾದ ಚಂಡಘೋಷನಿಗೆ ಯೌವರಾಜ್ಯಾಭಿಷೇಕ ವೆಂದು ಕೆಲವರು ಬಗೆದರು. ಮತ್ತೆ ಕೆಲವರು ರಾಜಪುತ್ರೀ ವಿವಾಹವಿರಬಹು ದೆಂದರು. ಆ ಅಲ್ಪಾವಧಿಯಲ್ಲೇ ಪಟ್ಟಣವನ್ನು ಗುಡಿತೋರಣಗಳಿಂದ ಅಲಂಕರಿಸಿದ್ದರು. ಭವ್ಯವಾದ ಆಸ್ಥಾನಮಂಟಪದಲ್ಲಿ ರಾಜನು ಸಿಂಹಾಸನ ದಲ್ಲಿ ಮಂಡಿಸಿದ್ದನು. ಬಂದಿದ್ದ ಜನರು ತಮತಮಗೆ ನಿಯತವಾಗಿದ್ದ ಆಸನಗಳಲ್ಲಿ ಕುಳಿತರು. ಮದುವಣಿಗನಂತೆ ಅಲಂಕೃತನಾಗಿದ್ದ ಕಾಮ ಪಾಲನು ಒಂದೆಡೆ ರತ್ನಾಸನದಲ್ಲಿ ಕುಳಿತಿದ್ದನು. ಕಾಂತಿಮತಿಯು ಸಾಲಂ ಕಾರಳಾಗಿ ಸಖಿಯರೊಂದಿಗೆ ಆಸ್ಥಾನಕ್ಕೆ ಬಂದಳು. ಮೊದಲೇ ಸಿದ್ಧರಾಗಿದ್ದ ಪುರೋಹಿತರು ರಾಜನ ಅಪ್ಪಣೆಯಂತೆ ಬಂದಿದ್ದ ಮಹಾಜನರನ್ನು ವಿವಾಹ ಮಾಡಿಸಲು ಅಪ್ಪಣೆ ಬೇಡಿದರು. ಕಾಂತಿಮತಿಗೂ ಕಾಮಪಾಲನಿಗೂ ವಿಧಿವತ್ತಾಗಿ ವಿವಾಹವು ನೆರವೇರಿತು. ಅನುರೂಪರಾದ ವಧೂವರರನ್ನು ಕಂಡು ಅಂತಃಪುರದವರೆಲ್ಲ ಸಂತುಷ್ಟರಾದರು.

ತಾರಾವಳಿ ಕಾಂತಿಮತಿಯರು ಸವತಿಮಾತ್ಸರ್ಯವಿಲ್ಲದೆ ಗೆಳತಿಯರಾಗಿ ಇದ್ದರು. ಸಮಯವರಿತು ತಾರಾವಳಿಯು ಕಾಂತಿಮತಿಗೆ ಎಲ್ಲ ವೃತ್ತಾಂತ ವನ್ನೂ ತಿಳಿಸಿ ತಮ್ಮ ಹಿಂದಿನ ಹುಟ್ಟಿನ ಗುಟ್ಟನ್ನೂ ತಿಳಿಸಿದಳು. ಪೂರ್ವ ಜನ್ಮದ ವೃತ್ತಾಂತವು ತಿಳಿದಮೇಲಂತೂ ಇಬ್ಬರ ಸ್ನೇಹವೂ ಗಾಢವಾಗಿ ಬೆಳೆಯಿತು.

ಕಾಮಪಾಲನು ಮನೆ ಅಳಿಯನಾಗಿ ಮಂತ್ರಿಪದವಿಗೇರಿದನು. ಹೆಸರಿಗೆ ಮಾತ್ರ ಅವನು ಮಂತ್ರಿ. ನಿಜವಾಗಿಯೂ ಅವನು ಯುವರಾಜನೆನಿಸಿ ಕೊಂಡಿದ್ದನು. ಮುದುಕನಾದ ರಾಜನು ಹೇಳಿದಂತೆ ಸಮಸ್ತ ರಾಜ್ಯಸೂತ್ರ ಗಳನ್ನೂ ಅಳಿಯನಿಗೆ ಒಪ್ಪಿಸಿಕೊಟ್ಟಿದ್ದನು. ರಾಜ್ಯವಷ್ಟೇ ಅಲ್ಲ. ರಾಜ ಕುಮಾರರನ್ನು ಬೆಳೆಸುವ ಭಾರವೂ ಅವನದಾಯಿತು. ಬಡವರು ಭಾಗ್ಯವಂತ ರೆನ್ನದೆ ಅವನು ಎಲ್ಲರಲ್ಲೂ ಸಹಜವಾದ ಪ್ರೀತಿಯನ್ನು ತೋರುತ್ತಿದ್ದನು. ಅವನಿಗೆಷ್ಟೋ ಮಂದಿ ಬಡವರೂ ಗೆಳೆಯರಿದ್ದರು. ಸರ್ವ ಪ್ರಾಣಿಗಳಲ್ಲೂ ಅವನು ದಯೆತೋರುತ್ತಿದ್ದುದರಿಂದ ಗೆಳೆಯರವನನ್ನು ಸರ್ವಭೂತ ಬಂಧು ವೆಂದು ಬಗೆಯುತ್ತಿದ್ದರು.

ಚಂಡಸಿಂಹನಿಗೆ ವಯಸ್ಸಾಗುತ್ತ ಬಂತು. ದಿನದಿನಕ್ಕೂ ಅವನ ಅವಯವಗಳು ಶಿಥಿಲವಾಗಿ ವಶತಪ್ಪಿದುವು. ಕ್ರಮವಾಗಿ ಅದು ಕ್ಷಯರೋಗ ವೆನಿಸಿಕೊಂಡಿತು. ಕೊನೆಗೊಂದು ದಿನ ಆ ಶಿಥಿಲದೇಹದಿಂದ ಜೀವನ ಯಾತ್ರೆಯನ್ನು ನಡೆಸಲಾರದೆ ರಾಜನ ಆತ್ಮವು ಇಹಲೋಕವನ್ನು ಬಿಟ್ಟಿತು. ತಂದೆಯು ಸ್ವರ್ಗವನ್ನು ಸೇರುವ ಮೊದಲೇ ಆತನ ದೊಡ್ಡ ಮಗನಾದ ಚಂಡ ಘೋಷನು ಕ್ಷಯರೋಗಕ್ಕೆ ತುತ್ತಾಗಿದ್ದನು. ರಾಜನ ಮರಣಾನಂತರ ದಕ್ಷ ರಾದ ರಾಜಪುತ್ರರು ಸಿಂಹಾಸನವನ್ನು ಏರುವ ಆಶೆಯು ಬಯಲಾಗಿತ್ತು. ಕಾಮಪಾಲನು ಯಾವ ತೊಂದರೆಯೂ ಇಲ್ಲದೆ ರಾಜನೆಂದು ಘೋಷಿಸಿ ಕೊಳ್ಳಬಹುದಾಗಿತ್ತು. ಆದರೂ ಅವನ ಮನಸ್ಸಿನಲ್ಲಿ ಈ ದುರಾಶೆಯು ಅಂಕುರಿಸಲಿಲ್ಲ. ಐದುವರ್ಷದ ಹಸುಳೆಯಾದ ಕಿರಿಮಗ ಸಿಂಹಘೋಷನನ್ನು ಎಲ್ಲ ಪ್ರಜೆಗಳ ಅಭಿಮತದೊಂದಿಗೆ ಗದ್ದುಗೆಗೇರಿಸಿದನು. ಸಜ್ಜನನಾದ ಆತನು ಆ ಬಾಲಕನಿಗೆ ರಾಜನಿಗೆ ಉಚಿತವಾದ ವಿದ್ಯಾಭ್ಯಾಸವನ್ನು ವಿದ್ವಾಂಸರಿಂದ ಮಾಡಿಸಿದನು. ಆತನಿಗೆ ಯೌವನವು ಬಂದು ಅವನೇ ಸ್ವತಂತ್ರವಾಗಿ ರಾಜ್ಯವಾಳುವವರೆಗೂ ರಾಜ್ಯಕಾರ್ಯ್ಯಗಳನ್ನು ಕಾಮಪಾಲನೇ ನೋಡಿಕೊಂಡನು. ಸರ್ವಸಮ್ಮತವಾಗಿದ್ದ ಆ ರಾಜ್ಯಭಾರವನ್ನು ಎಲ್ಲರೂ ಮೆಚ್ಚಿದರು. ಕುಮಾರ ರಾಜನೂ ಮೊದಮೊದಲು ವಿಧೇಯನಾಗಿದ್ದುಕೊಂಡು ಭಾವನ ಇಷ್ಟದಂತೆ ನಡೆಯುತ್ತಿದ್ದನು.

ಸಿಂಹಘೋಷನು ಯುವಕನಾಗುತ್ತ ಬಂದನು. ರಾಜರು ಹುಡುಗ ರಾಗಿದ್ದಲ್ಲಿ ಎಷ್ಟೇ ವಿದ್ಯಾವಂತರಾದರೂ ದುರ್ಮಂತ್ರಿಗಳ ದುರ್ಬೋಧನೆಗೆ ಕಿವಿಗೊಡುವುದು ಸ್ವಾಭಾವಿಕ. ಯವ್ವನದಲ್ಲಂತೂ ಅವರನ್ನು ಹಿಡಿಯು ವುದು ಸಾಧ್ಯವಲ್ಲ. ಯವ್ವನ, ಹಣ, ಪ್ರಭುತ್ವ ಇವುಗಳ ಜೊತೆಗೆ ಅವಿ ವೇಕವೂ ಮನೆಮಾಡಿಕೊಂಡಿರುತ್ತದೆ. ಅದೂ ಅಲ್ಲದೆ ಅನುಭವವಿಲ್ಲದ ಎಳೆಯರಾಜರೆಂದರೆ ಚಾಡಿಕೋರರಿಗೆ ಸುಗ್ಗಿ. ಅವರು ಸಮಯವರಿತು ರಾಜರಕಿವಿಯಲ್ಲಿ ವಿಷಬೀಜವನ್ನು ಬಿತ್ತದೆ ಬಿಡುವುದಿಲ್ಲ. ರಾಜನ ಅವಿವೇಕ ದಿಂದ ಆ ಬಿತ್ತವು ಪುಷ್ಟವಾಗಿ ಅಂಕುರಿಸಿ ವಿಷಫಲವನ್ನು ಕೊಡದಿರುವುದೆಂತು? ದುರ್ಜನರನ್ನು ಆಪ್ತರೆಂದು ಬಗೆಯದ ರಾಜರು ಬಹು ವಿರಳ. ಯುವಕ ನಾದ ಸಿಂಹಘೋಷನಿಗೂ ಅನೇಕ ದುರ್ಮಂತ್ರಿಗಳು ಆಪ್ತಸ್ನೇಹಿತರಾಗಿದ್ದರು.

ಆ ದುರ್ಮಂತ್ರಿಗಳು ನಿಷ್ಕಾರಣವಾಗಿ ಕಾಮಪಾಲನನ್ನು ದ್ವೇಷಿಸುತ್ತಿದ್ದರು. ಸಜ್ಜನರ ಸೌಜನ್ಯವೇ ದುರ್ಜನರಿಗೆ ದ್ವೇಷವನ್ನು ಹುಟ್ಟಿಸುತ್ತದೆ. ಆಗಾಗ ಆ ತರುಣ ರಾಜನ ಮನಸ್ಸನ್ನು ಕದಡಿ ಮಲಿನಮಾಡಲು ಇವರು ಪ್ರಯತ್ನಿ ಸುತ್ತಿದ್ದರು.

ರಾಜನು ತಮ್ಮ ಮಾತಿನಲ್ಲಿ ಸ್ವಲ್ಪ ವಿಶ್ವಾಸ ತೋರಿಸುತ್ತಿರುವನೆಂದು ಮನಗಂಡಮೇಲೆ ಆ ಆಪ್ತಗೆಳೆಯರಂತಿದ್ದ ದುಷ್ಟರು ರಾಜನಿಗೆ ಬಲವಾಗಿ ಉಪದೇಶಮಾಡಿದರು. 'ಮಹಾಸ್ವಾಮಿ, ತಾವು ಈ ಕಾಮಪಾಲನನ್ನು ಭಾವನೆಂದು ಬಹಳ ಗೌರವದಿಂದ ಕಾಣುತ್ತಿರುವುದು ನಮಗೆಲ್ಲ ಬಹು ದುಃಖ ವನ್ನುಂಟುಮಾಡಿದೆ. ಹೊಟ್ಟೆಯ ಕಿಚ್ಚಿನಿಂದಲ್ಲ. ಇವನು ಆ ಗೌರವಕ್ಕೆ ಅರ್ಹನಲ್ಲವೆಂದು. ಇವನು ಬಲಾತ್ಕಾರವಾಗಿ ಗುಟ್ಟಾಗಿ ತಮ್ಮ ಸಹೋದರಿ ಯನ್ನು ಸೇರಿದ್ದೇ ಅಲ್ಲದೆ, ಮಲಗಿದ್ದ ಮಹಾರಾಜರನ್ನು ಕೊಲ್ಲಬೆಳಸಿ ನಡು ರಾತ್ರಿಯಲ್ಲಿ ಕತ್ತಿಯೆತ್ತಿದ್ದ ಕೊಲೆಗಡಕನು. ಆ ನಿಮ್ಮ ತಂದೆಯಾದ ಮುದಿರಾಜನು ಏನುಮಾಡಲೂ ಸಾಧ್ಯವಿಲ್ಲದವನಾಗಿ ಭಯದಿಂದ ಈ ಕಾಮುಕನನ್ನು ಒಲಿಸಲು ಮಗಳನ್ನೂ ಕೊಟ್ಟು ವಿವಾಹಮಾಡಿದನು. ಅರಮನೆಯನ್ನು ಸೇರಿದ ಇವನು ಅರಸನ ಕುಲವನ್ನೇ ನಾಶಮಾಡುತ್ತಿರು ವನು. ತಮ್ಮ ಅಣ್ಣಂದಿರಾದ ಚಂಡಘೋಷರಾಜರು ಆಯುಸ್ಸುತೀರಿ ಸತ್ತವರಲ್ಲ. ಅವರೇ ಮುಂದಿನ ಸಿಂಹಾಸನಾಧಿಕಾರಿಗಳಾಗಿದ್ದುದರಿಂದ ಈ ದುಷ್ಟನು ಅವರಿದ್ದಲ್ಲಿ ತನ್ನ ಇಷ್ಟಾರ್ಥವು ಈಡೇರುವುದಿಲ್ಲವೆಂದು ತಿಳಿದು ವಿಷಪ್ರಯೋಗಮಾಡಿಸಿದನು. ಮುದಿರಾಜನೂ ಮುಂದಿನ ಸಿಂಹಾಸನಾಧಿ ಕಾರಿಯೂ ಹೋದುದು ಅವನ ರೊಟ್ಟಿಜಾರಿ ತುಪ್ಪದಲ್ಲಿ ಬಿದ್ದಂತಾಯಿತು. ರಾಜ್ಯವನ್ನು ತಾನೇ ಆಕ್ರಮಿಸಿದರೆ ಪ್ರಜಾಕೋಪಕ್ಕೆ ಗುರಿಯಾಗುವೆನೆಂದು ಬಗೆದ ಈ ನರಾಧಮನು ಹೆಸರಿಗೆ ಐದುವರ್ಷದ ಹಸುಳೆಯಾಗಿದ್ದ ತಮ್ಮನ್ನು ರಾಜರನ್ನಾಗಿ ಮಾಡಿ ತಾನೇ ತಾನಾಗಿ ರಾಜ್ಯಭಾರಮಾಡುತ್ತಿರುವನು. ಇವನ ದುರಾಶೆಗೆ ಕೊನೆಯಿಲ್ಲ. ತಾವು ಯೌವನ ಶಾಲಿಗಳಾದರೂ ಇನ್ನೂ ತಮ್ಮನ್ನು ಸ್ವತಂತ್ರವಾಗಿ ರಾಜ್ಯವಾಳಗೊಡುತ್ತಿಲ್ಲ. ತಾವು ಪ್ರಜೆಗಳ ವಿಶ್ವಾ ಸಕ್ಕೆ ಪಾತ್ರರಾಗುವಿರೆಂದು ತಿಳಿದೇ ಇವನು ರಾಜಕಾರ್ಯದಲ್ಲಿ ತಮ್ಮನ್ನು ಸೇರಿಸಿಕೊಳ್ಳದೆ ಉದಾಸೀನವಾಗಿ ಕಾಣುತ್ತಿರುವನು. ತಾವು ಇವನ

ಕೈಗೊಂಬೆಯಂತೆ ಇರುವುದರಿಂದ ಇವನು ಏನುಮಾಡುವುದಕ್ಕೂ ಹಿಂತೆಗೆಯು ವುದಿಲ್ಲ. ಕೃತಘ್ನನಾದ ಇವನು ತಮ್ಮನ್ನು ಯಾವಾಗ ಮುಗಿಸಿಬಿಡುವನೋ ಎಂಬ ಭಯವು ಯಾವಾಗಲೂ ನಮ್ಮನ್ನು ಆವರಿಸಿದೆ. ಅದ್ದರಿಂದಲೇ ಆಪ್ತರಾದ ನಾವು ತಮ್ಮ ಹಿತವನ್ನು ಬಯಸಿ ಈ ವಿಷಯವನ್ನು ತಮ್ಮಲ್ಲಿ ವಿಜ್ಞಾಪಿಸಿಕೊಂಡುದು. ಈಗ ತಾವು ಚಿರಕಾಲ ಬದುಕಿದ್ದು ರಾಜ್ಯಭಾರ ಮಾಡಬೇಕೆಂಬ ಈ ನಮ್ಮ ಹೇರಾಸೆಯನ್ನು ಉಳಿಸಿಕೊಡಬೇಕೆಂದಿದ್ದಲ್ಲಿ ಈ ನೀಚನನ್ನು ಆದಷ್ಟು ಜಾಗ್ರತೆಯಾಗಿ ಯಮನಗರವನ್ನು ಸೇರಿಸಲು ಯತ್ನಿಸ ಬೇಕು. ತಮ್ಮ ಮತ್ತು ರಾಜ್ಯದ ದೃಷ್ಟಿಯಿಂದ ಈ ಪಾಪಿಯು ಸರ್ವಥಾ ಬದು ಕಿರಲು ಯೋಗ್ಯನಲ್ಲ.'

ಮರ್ಮಂತ್ರಿಗಳ ಈ ದುರುಪದೇಶವು ಆ ತರುಣರಾಜನ ಮನಸ್ಸಿನಲ್ಲಿ ಬೇರೂರಿತು. ಕಾಮಪಾಲನ ಮೇಲೆ ಇಲ್ಲದ ಸಲ್ಲದ ಈ ತಪ್ಪುಗಳನ್ನು ಹೊರಿಸಿ ಮರಣದಂಡನೆಗೆ ಗುರಿಪಡಿಸಬೇಕೆಂದು ಅವನು ಆಲೋಚಿಸಿದನು. ಆದರೆ ಇದನ್ನು ಕಾರ್ಯರೂಪಕ್ಕೆ ತರಲು ಅವನಿಗೆ ಧೈರ್ಯವಿರಲಿಲ್ಲ. ಕಾಮ ಪಾಲನ ದೇಹಕ್ಕೆ ಯಾವ ಅಲ್ಪ ತೊಂದರೆಯೂ ಒದಗದಂತೆ ಯಕ್ಷಕನ್ಯೆ ಯೊಬ್ಬಳು ಕಾಯುತ್ತಿರುವಳೆಂದು ಅವನು ರಾಣಿಯಿಂದ ತಿಳಿದಿದ್ದನು. ಯಕ್ಷ ಕನ್ಯೆಯ ಸಹಾಯವಿರುವವರೆಗೆ ಅವನನ್ನು ಕೊಲ್ಲುವುದು ಅಸಾಧ್ಯವೆಂದೂ ಹಾಗೇನಾದರೂ ಕೊಂದಲ್ಲಿ ಯಕ್ಷಿಯ ಕೋಪಕ್ಕೆ ತಾನೂ ತನ್ನ ರಾಜ್ಯವೂ ತುತ್ತಾಗುವುದೆಂದೂ ಅವನು ಭಯಪಡುತ್ತಿದ್ದನು. ಹೀಗೆ ಅವನ ಮನಸ್ಸಿನಲ್ಲಿ ಸೇಡುತೀರಿಸಿಕೊಳ್ಳಬೇಕೆಂಬ ತವಕವಿದ್ದರೂ ಸಾಧ್ಯವಿಲ್ಲದೆ ಸುಮ್ಮನಿದ್ದನು.

ಕೇಡುಗಾಲವು ಸಮೀಪಿಸಿದಂತೆಲ್ಲ ಮನುಷ್ಯನ ಪ್ರಯತ್ನವಿಲ್ಲದೆಯೇ ಅದಕ್ಕೆ ತಕ್ಕ ಸಾಧನಗಳು ತಾವಾಗಿಯೇ ಸಿದ್ಧವಾಗುವುವು. ಕಾಮಪಾಲನ ದೆಸೆಯು ಕ್ಷೀಣಿಸುತ್ತ ಬಂದಿತು. ಎಷ್ಟೇ ಎಚ್ಚರದಿಂದಿದ್ದರೂ ಅವನು ಅದನ್ನು ತಪ್ಪಿಸಿಕೊಳ್ಳಲಾಗಲಿಲ್ಲ. ಯಕ್ಷಕನ್ಯೆಯಾದ ತಾರಾವಳಿಯು ಸವತಿಯೆಂಬ ಭೇದಭಾವವಿಲ್ಲದೆ ಕಾಂತಿಮತಿಯೊಡನೆ ಬೆರೆತಿದ್ದಳಲ್ಲವೇ! ಇವರಿಬ್ಬರ ಗಾಢ ಸ್ನೇಹವು ಪತಿಯಾದ ಕಾಮಪಾಲನಿಗೂ ತಿಳಿದಿದ್ದಿತು. ಅವನ ಸಂತೋಷಕ್ಕೆ ಪಾರವಿರಲಿಲ್ಲ. ಆದರೂ ಅವನು ಹೆಂಗುಸರು ಚಪಲಚಿತ್ತರೆಂಬುದನ್ನು ಚೆನ್ನಾಗಿ ಅರಿತಿದ್ದನು. ಅವರ ಪ್ರೇಮವು ತೃಣಾಗ್ರದಲ್ಲಿ ನಿಂತಿರುವ ಮಂಜಿನ

ಹಸಿಯಂತೆ ಶಾಶ್ವತವಲ್ಲವೆಂದೂ ಅವನು ತಿಳಿದಿದ್ದನು. ಅವನು ಎಂದೂ ಕಾಂತಿಮತಿಯ ಎದುರಿನಲ್ಲಿ ತಾರಾವಳಿಯ ಹೆಸರನ್ನಾಗಲೀ ತಾರಾವಳಿಯ ಎದುರಿನಲ್ಲಿ ಕಾಂತಿಮತಿಯ ಹೆಸರನ್ನಾಗಲೀ ಹೇಳುತ್ತಿರಲಿಲ್ಲ. ಯಾರೊಬ್ಬರ ಎದುರಿನಲ್ಲಿ ಮತ್ತೊಬ್ಬರ ಹೆಸರನ್ನೆತ್ತಿದರೆ ಅವರಲ್ಲಿ ಅತಿಶಯ ಪ್ರೇಮವೆಂದು ಅವರು ತಿಳಿದು ಕೋಪಗೊಂಡಾರು ಎಂದು ಅವನು ಶಂಕಿಸುತ್ತಿದ್ದನು. ಹೀಗಿದ್ದೂ ಒಂದುದಿನ ಒಂದು ಅಚಾತುರ್ಯವು ನಡೆದುಹೋಯಿತು. ತಾರಾ ವಳಿಯೊಡನೆ ವಿಹರಿಸುತ್ತಿದ್ದ ಕಾಮಪಾಲನು ಮಾತಿನ ಭರದಲ್ಲಿ ಮರೆತು 'ಪ್ರಿಯೆ ತಾರಾವಳಿ' ಎಂದು ಕೂಗುವುದಕ್ಕೆ ಬದಲಾಗಿ 'ಪ್ರಿಯೆ ಕಾಂತಿಮತಿ' ಎಂದು ತಪ್ಪಿನುಡಿದನು. ತಾನು ದಿವ್ಯಲೋಕಸುಂದರಿಯೆಂದೂ ತನ್ನಿಂದಲೇ ಮನುಷ್ಯ ಲೋಕದ ಕಾಂತಿಮತಿಯು ಸುಖಪಡುವಂತೆ ಆಗಿರುವಳೆಂದೂ ತಿಳಿದಿದ್ದ ತಾರಾವಳಿಯು ತನ್ನ ಪತಿಯ ಪ್ರೇಮಕ್ಕೆ ಅತಿಶಯವಾಗಿ ತಾನೇ ಪಾತ್ರಳೆಂದು ಹೆಮ್ಮೆಪಡುತ್ತಿದ್ದಳು. ಅದಕ್ಕೆ ತಕ್ಕಂತೆ ಕಾಂತಿಮತಿಯೂ ಸವತಿಯೆಂದು ಕೂಡ ಯೋಚಿಸದೆ ಗೌರವದಿಂದ ಅವಳನ್ನು ಕಾಣುತ್ತಿದ್ದಳು. ಇಂದು ತನ್ನ ಎದುರಿನಲ್ಲೇ ತನ್ನ ಸವತಿಯ ಹೆಸರು ಕೂಗಿದುದು ಅವಳಿಗೆ ಸ್ವಲ್ಪವೂ ಸಹಿಸಲಿಲ್ಲ. ಹಿಂದಿನ ಪ್ರೇಮವೆಲ್ಲವನ್ನೂ ಒಮ್ಮೆಯೇ ಅವಳು ಮರೆತಳು. ಪತಿಯು ತನ್ನ ತಪ್ಪಿಗೆ ನಾಚಿ ತಾನೇ ಬೇಡಿಕೊಂಡರು ಅವಳ ಮನಸ್ಸು ಸ್ಥಿಮಿತಕ್ಕೆ ಬರಲಿಲ್ಲ. ಅವಳು ಕೋಪಾವಿಷ್ಟಳಾಗಿ ಮರುಮಾತಾಡದೆ ಅಲ್ಲಿಂದ ಹೊರಟೇ ಹೋದಳು.

ಪ್ರಿಯತಮೆಯು ಹೀಗೆ ಇದ್ದಕ್ಕಿದ್ದಹಾಗೆ ಸಿಟ್ಟಿನಿಂದ ಹೊರಟು ಹೋದುದು ಕಾಮಪಾಲನಿಗೆ ಬಹಳ ವ್ಯಸನವನ್ನುಂಟುಮಾಡಿತು. ಅವನ ಅವಯವಗಳು ಅವಳ ಅಗಲುವಿಕೆಯ ವೇದನೆಯಿಂದ ಬೆಳ್ಳಗಾಗುತ್ತ ಬಂದುವು. ಕಣ್ಣೀರು ತೊಟ್ಟಿಡುವಂತಿದ್ದರೂ ಧೈರ್ಯಶಾಲಿಯಾದ ಅವನು ಅದನ್ನು ತಡೆದನು. ಬಿಸಿಯುಸಿರನ್ನುಬಿಡುತ್ತಿದ್ದ ಅವನಿಗೆ ಈಚೆಗೆ ಮಾತನಾಡುವುದರಲ್ಲಿ ಆಶೆಯಿರಲಿಲ್ಲ. ಆದರೂ ರಾಜಕಾರ್ಯಗಳಲ್ಲಿ ಉದಾಸೀನನಾಗದೆ ಕೆಲಸಗಳನ್ನು ಎಂದಿನಂತೆಯೇ ಮಾಡುತ್ತಿದ್ದನು.

ಪತಿಯ ಈ ಅವಸ್ಥೆಯು ಕಾಂತಿಮತಿಗೆ ಕಾತುರತೆಯನ್ನುಂಟುಮಾಡಿತು. ಅವಳ ಮುಖವು ಬಾಡಿತು. ಮೊದಲಿನ ನಗೆ ಮರೆಯಾಯಿತು. ಹೃದಯ

ದಲ್ಲಿ ಉಬ್ಬೆಗವು ಮನೆಮಾಡಿತು. ಅವಳು ನಿದ್ರಾಹಾರಗಳನ್ನು ತೊರೆದು ಯೋಚಿಸುತ್ತಿದ್ದಳು.

ರಾಣಿಯಾದ ಸುಲಕ್ಷಣೆಯು ಕಾಂತಿಮತಿಯ ಮುಖವು ತೇಜೋಹೀನವಾಗಿದ್ದುದನ್ನೂ ಅವಳು ನಿತ್ಯವ್ಯಾಪಾರಗಳಲ್ಲಿ ಎಂದಿನಂತೆ ಆಸಕ್ತಿಯನ್ನು ತೋರದೆ ವಿಮುಖಳಾಗಿದ್ದುದನ್ನೂ ಗಮನವಿಟ್ಟು ನೋಡುತ್ತಿದ್ದಳು. ಇದ್ದಕ್ಕಿದ್ದಂತೆಯೇ ರಾಜಪುತ್ರಿಯು ಜೀವನದಲ್ಲೇ ಜಿಹಾಸೆಯಿಂದ ವರ್ತಿಸುತ್ತಿದ್ದುದಕ್ಕೆ ಕಾರಣವೇನೆಂದು ಅವಳಿಗೆ ತೋರಲಿಲ್ಲ. ಆ ಕಾರಣವನ್ನು ತಿಳಿಯಬೇಕೆಂದು ಅವಳು ಮನಸ್ಸು ಮಾಡಿದಳು. ಒಮ್ಮೆ ಅವರಿಬ್ಬರೇ ಅಂತಃಪುರದಲ್ಲಿದ್ದಾಗ ಅವಳು ಮೆಲ್ಲನೆ ಕಾಂತಿಮತಿಯನ್ನು ಕುರಿತು ' ದೇವಿ, ಸುಳ್ಳು ಹೇಳಿ ನೀನು ನನ್ನನ್ನು ವಂಚಿಸಬೇಡ. ಇತ್ತೀಚೆಗೆ ನಿನ್ನ ಮುಖದಲ್ಲಿ ಮೊದಲಿನಂತೆ ಕಾಂತಿಯಿಲ್ಲ. ಬಾಡಿದೆ. ಇದಕ್ಕೆ ಕಾರಣವೇನು ? ನಿಜವಾಗಿ ಹೇಳು." ಎಂದು ಕೇಳಿದಳು. ಕಾಂತಿಮತಿಗೆ ಸುಲಕ್ಷಣೆಯಲ್ಲಿ ಯಾವ ಸಂದೇಹವೂ ಇರಲಿಲ್ಲ. ತಾನು ನಿಜವಾದ ಕಾರಣವನ್ನು ತಿಳಿಸುವುದರಿಂದ ಏನು ತೊಂದರೆಯಾಗಬಹುದೆಂಬ ಅರಿವೂ ಅವಳಿಗಿರಲಿಲ್ಲ. ಅವಳು ಸಹಜವಾದ ಸೌಜನ್ಯದಿಂದ ರಾಣಿಗುತ್ತರವಿತ್ತಳು. ' ದೇವಿ, ನಾನು ಹಿಂದೆ ಎಂದಾದರೂ ಹಾಗೆ ಸುಳ್ಳುಹೇಳಿ ನಿನ್ನನ್ನು ವಂಚಿಸಿರುವೇನೆ ? ಹಾಗೆ ಮಾಡಿದ್ದು ನಿನಗೆ ನೆನಪಿದ್ದರೆ ಹೇಳು. ಹೆಂಗಸಿನ ದುಃಖಕ್ಕೆ ಪತಿಯಲ್ಲದೆ ಮತ್ತಾರು ಕಾರಣರು ? ಪತಿಯು ಸಂತುಷ್ಟನಾಗಿದ್ದರೆ ಹೇಳು ನತಿಯೂ ಸಂತುಷ್ಟಳಾಗಿರುವಳು. ನೀನೆ ನೋಡುತ್ತಿರುವೆಯಲ್ಲವೇ ? ಕೆಲವು ದಿನಗಳಿಂದ ನನ್ನ ಪತಿದೇವನು ನನ್ನ ಸವತಿಯಾದ ತಾರಾವಳಿಯೆಂಬ ಯಕ್ಷಿಯು ಕಾರಣಾಂತರದಿಂದ ತನ್ನನ್ನು ಬಿಟ್ಟು ಹೋದುದಕ್ಕಾಗಿ ದುಃಖಿಸುತ್ತಿರುವನು. ಆತನೇ ದುಃಖಿಸುವಾಗ ನನಗೆ ಸಂತೋಷವೆಲ್ಲಿಬಂತು ? ಆದ್ದರಿಂದ ನನಗೆ ಜೀವನವೇ ಬೇಸರವಾಗಿದೆ. ಇದೇ ನನ್ನ ದುಃಖಕ್ಕೆ ಕಾರಣ".

ರಾಣಿಗೂ ಮನಸ್ಸಿನಲ್ಲಿ ನೋವಾಯಿತು. ಈ ಮಾತು ಅವಳ ಬಾಯಲ್ಲಿ ನಿಲ್ಲಲಿಲ್ಲ. ಅವಳು ಏಕಾಂತದಲ್ಲಿ ಈ ಮಾತನ್ನು ರಾಜನ ಕಿವಿಯಲ್ಲಿ ಬಿತ್ತಿದಳು. ಪಾಪ! ಅವಳಿಗೇನು ಗೊತ್ತು ಮುಂದೇನಾಗುವುದೆಂದು ? ಸ್ತ್ರೀ

ಸುಲಭವಾದ ಚಾಪಲ್ಯದಿಂದ ಅವಳು ನುಡಿದಳು. ಕೂಡಲೆ ಹರ್ಷದಿಂದ ರಾಜನ ಮುಖವು ಹಿಗ್ಗಿತು. ರಾಣಿಗೆ ಇವರಿಂದ ಆಶ್ಚರ್ಯವೂ ಆಯಿತು.

೩

ಇತ್ತ ವಾಮದೇವ ಮಹರ್ಷಿಗಳಾಶ್ರಮದಲ್ಲಿ ರಾಜವಾಹನನೊಂದಿಗೆ ಬೆಳೆದ ಅರ್ಥಪಾಲನು ರಾಜಕುಮಾರನಂತೆ ತಾನೂ ವಿದ್ಯಾವಂತನಾಗಿ ಮಿಕ್ಕ ಮಂತ್ರಿ ಮಕ್ಕಳೊಂದಿಗೆ ಬೆರೆತು ರಾಜಪುತ್ರನಿಗೆ ಆಪ್ತಸ್ನೇಹಿತನಾದನು. ರಾಜವಾಹನನು ದಿಗ್ವಿಜಯಕ್ಕೆ ಹೊರಟಾಗ ಎಲ್ಲ ಕುಮಾರರಂತೆ ತಾನೂ ಅವನನ್ನು ಹಿಂಬಾಲಿಸಿ ಬಂದನು. ಅರ್ಧರಾತ್ರಿಯಲ್ಲಿ ಯಾರಿಗೂ ತಿಳಿಯ ದಂತೆ ಮಾತಂಗನ ಸಹಾಯಕ್ಕಾಗಿ ರಾಜಪುತ್ರನು ಹೊರಟುಹೋಗಲು ಬೆಳಗ್ಗೆ ಎಲ್ಲರ ಜೊತೆಗೆ ಎದ್ದು ಅಲ್ಲಿ ಇಲ್ಲಿ ಹುಡುಕಿ ಎಲ್ಲೂಕಾಣದೆ ಅವನನ್ನೇ ಹುಡುಕಿಕೊಂಡು ಹೊರಟನು. ಎಲ್ಲೆಲ್ಲಿ ಹುಡುಕಿದರೂ ರಾಜಪುತ್ರನ ಸುಳಿವೇ ಇಲ್ಲ. ಪ್ರಸಿದ್ಧವಾದ ದೇಶಗಳನ್ನು ಸುತ್ತಿಕೊಂಡು ಒಂದುಸಲ ಕಾಶೀಪಟ್ಟ ಣಕ್ಕೆ ಬಂದನು. ಗಂಗಾನದಿಯು ತನ್ನ ಸ್ವಚ್ಛವಾದ ನೀರಿನಿಂದ ಅವಿಮುಕ್ತೇ ಶ್ವರನನ್ನು ಅಭಿಷೇಕಿಸುವಂತೆ ಶಿವಾಲಯದ ಸಮೀಪದಲ್ಲಿ ಹರಿಯುತ್ತಿತ್ತು. ಭಗೀರಥನ ಮಹಾಪ್ರಯತ್ನದಿಂದ ಮನುಜರನ್ನೆಲ್ಲಾ ಪವಿತ್ರಗೊಳಿಸುವ ಸಲು ವಾಗಿ ಭರತಖಂಡದ ಆರ್ಯಾವರ್ತದಲ್ಲಿ ಗಂಭೀರವಾಗಿ ಹರಿಯುವ ಆ ಭಾಗೀ ರಥಿಯ ಪುಣ್ಯಜಲದಲ್ಲಿ ಮಿಂದು ಪಾಪರಹಿತರಾಗಲು ಯಾತ್ರಿಕರು ಗುಂಪು ಗುಂಪಾಗಿ ಬರುತ್ತಿದ್ದರು. ನದಿಯುದ್ದಕ್ಕೂ ಇರುವ ಸ್ನಾನ ಘಟ್ಟಗಳಲ್ಲೆಲ್ಲ ಮಣಿಕರ್ಣಿಕೆಗೊಂದು ಹಿರಿಮೆ. ಆ ಘಟ್ಟದಲ್ಲಿ ನೀರು ಮಣಿಯ ಚೂರು ಗಳಂತೆ ನಿರ್ಮಲವಾಗಿದ್ದಿತು. ಯುವಕನಾದ ಅರ್ಥಪಾಲನು ತಾನೂ ಆ ಘಟ್ಟದಲ್ಲಿ ಸ್ನಾನಮಾಡಿ ಮೆಟ್ಟಿಲು ಹತ್ತಿ ದೇವಸ್ಥಾನವನ್ನು ಪ್ರವೇಶಿಸಿ ದನು. ಅವಿಮುಕ್ತೇಶ್ವರ ಲಿಂಗಕ್ಕೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ ಸ್ವಲ್ಪ ಹೊತ್ತು ಕುಳಿತನು.

ಬಲಗಡೆಗೆ ಅವನ ನೋಟವು ಹರಿಯಿತು. ಎತ್ತರವಾಗಿ ದಪ್ಪನಾಗಿ ರುವ ಮನುಷ್ಯನೊಬ್ಬನು ಉಕ್ಕಿನಂತೆ ಕರ್ಕಶವಾಗಿದ್ದರೂ ದುಂಡಗಿರುವ ತನ್ನ

ತೋಳುಗಳಿಂದ ನಡುಕಟ್ಟನ್ನು ಬಿಗಿದುಕೊಳ್ಳುತ್ತಿದ್ದನು. ಪುರುಷನನ್ನು ನೋಡಿದರೆ ಬಹಳ ಕಠಿಣವಾದ ದೇಹವುಳ್ಳವನಂತೆ ಕಾಣುತ್ತಿತ್ತು. ಅವನ ಕಣ್ಣುಗಳಿಂದ ನೀರು ಸಂತತವಾಗಿ ಹರಿದು ಬರುತ್ತಿತ್ತು. ಕಣ್ಣುಗಳು ಕೆಂಪ ಗಿದ್ದುವು. ಆದರೆ ಅವುಗಳಲ್ಲಿ ಏನೇನೂ ಕಾಂತಿಯಿರಲಿಲ್ಲ. ನೋಡಿದ ವರೆಲ್ಲರೂ ಕೂಡಲೆ ಅವನ ದೈನ್ಯವನ್ನು ತಿಳಿಯಬಹುದಾಗಿತ್ತು. ಅವನ ಪ್ರಯತ್ನವನ್ನು ನೋಡಿದರೆ ಯಾವುದೋ ಒಂದು ಸಾಹಸಕಾರ್ಯಕ್ಕೆ ತೊಡ ಗಿದ್ದಂತೆ ಕಾಣುತ್ತಿತ್ತು. ಸುಲಭವಾಗಿ ಯಾವನಾದರೂ ಅವನಿಗೆ ಜೀವಿತ ದಲ್ಲಿ ಆಶೆಯಿರಲಿಲ್ಲವೆಂದು ಊಹಿಸಬಹುದಾಗಿತ್ತು. ಅವನು ತನ್ನ ಪ್ರಾಣ ಗಳನ್ನಾದರೂ ತ್ಯಜಿಸಿ ಬಂದಿದ್ದ ಮಹಾದುಃಖವನ್ನು ಕಳೆದುಕೊಳ್ಳಬೇಕೆಂದಿದ್ದ ವನಂತೆ ತೋರುತ್ತಿತ್ತು. ಪ್ರಾಣಕ್ಕಿಂತ ಪ್ರಿಯವಾದ ವಸ್ತುವುಂಟೇ? ಅದನ್ನೂ ಬಿಡಬೇಕಾದರೆ ಅದಕ್ಕಿಂತಲೂ ಪ್ರಿಯವಾದ ವಸ್ತುವು ಬೇರೊಂದಿರ ಬೇಕಲ್ಲವೇ?

ತರುಣನು ಯೋಚಿಸತೊಡಗಿದನು. 'ಇವನಿಗೆ ಒದಗಿ ಬಂದಿರುವ ಅತಿಶಯ ದುಃಖವಾದರೂ ಏನು? ಇವನಿಗೆ ಪ್ರಿಯರಾದ ಜನರಿಗೆ ಏನಾದರೂ ಪ್ರಾಣಾಪಾಯಕರವಾದ ವಿಪತ್ತು ಬಂದಿರಬಹುದೆ? ಸಾಮಾನ್ಯ ಕಾರಣ ಕ್ಕಾಗಿ ಇಂತಹ ಧೈರ್ಯಶಾಲಿಯು ಎಂದೂ ಈ ಬಗೆಯ ಸಾಹಸಕ್ಕೆ ಕೈಹಾಕುವು ದಿಲ್ಲ. ಇಂಥ ಆಪತ್ತಿನಲ್ಲಿ ಸಹಾಯ ಮಾಡಿದವನೇ ಆಪದ್ಬಂಧುವು. ಹಾಗೇ ನಾದರೂ ಸಹಾಯಮಾಡಲು ಅವಕಾಶವಿರುವುದೇನೋ ಕೇಳಿ ನೋಡುತ್ತೇನೆ. ನನ್ನಲ್ಲಿರುವ ಶಕ್ತಿಯು ಪರೋಪಕಾರಕ್ಕಲ್ಲದಿದ್ದರೆ ಮತ್ತೇತಕ್ಕೆ?' ಎಂದು ಮುಂತಾಗಿ ಯೋಚಿಸಿ ಮೆಲ್ಲನೆ ಅವನ ಬಳಿಗೆ ಬಂದನು.

"ಮಂಗಳ ಕರನೇ, ಈ ನಿನ್ನ ಸಿದ್ಧತೆಯು ಯಾವುದೋ ಮಹಾಸಾಹಸ ಕ್ಕೆಂದು ಕಂಡುಬರುತ್ತಿದೆ. ರಹಸ್ಯವಲ್ಲದಿದ್ದರೆ ನಿನ್ನ ದುಃಖಕ್ಕೆ ಕಾರಣವನ್ನು ತಿಳಿಯಬೇಕೆಂದಿದ್ದೇನೆ" ಎಂದನು.

ದೇವಾಲಯಕ್ಕೆ ಬಂದು ಹೋಗುತ್ತಿದ್ದ ನೂರಾರು ಯಾತ್ರಿಕರಲ್ಲಿ ಯಾರೊಬ್ಬರೂ ವಿಚಾರಮಾಡದಿರುವಾಗ ಈ ತರುಣನು ಮಾತ್ರ ವಿಚಾರಿ ಸಿದ್ದು ಅವನಿಗೆ ಆಶ್ಚರ್ಯವನ್ನೂ ಸಂತೋಷವನ್ನೂ ಉಂಟುಮಾಡಿತು. ತರುಣನ ದೃಢವಾದ ದೇಹ, ಸೌಮನಸ್ಯಗಳನ್ನು ಕಂಡ ಆ ಪುರುಷನಿಗೆ

ಅವನಲ್ಲಿ ವಿಶ್ವಾಸವು ಹುಟ್ಟಿತು. 'ದೋಷವೇನಿದೆ. ಅಗತ್ಯವಾಗಿ ಕೇಳ ಬಹುದು" ಎಂದು ಹೇಳುತ್ತಾ ಅವನ ಕೈಯನ್ನು ಹಿಡಿದುಕೊಂಡು ಗರ್ಭ ಗುಡಿಯಿಂದ ಹೊರಪ್ರಾಕಾರಕ್ಕೆ ಬಂದನು. ಜನಸಂಚಾರವಿಲ್ಲದ ಮೂಲೆ ಯೊಂದರಲ್ಲಿ ಕಸದ ರಾಶಿ ಬಿದ್ದಿತ್ತು. ಗೋಡೆಯ ಹತ್ತಿರವೇ ದೊಡ್ಡ ದೊಂದು ಕರವೀರ ವೃಕ್ಷವಿದ್ದಿತು. ಅದರ ಬೇರುಗಳು ಗೋಡೆಯಲ್ಲಿ ನುಗ್ಗಿ ಕಲ್ಲುಗಳನ್ನು ನಡಲಿಸಿದ್ದುವು. ಅಪಚರಿತ ಪುರುಷನು ತರುಣನನ್ನು ಅಲ್ಲಿಗೆ ಕರೆತಂದು ಆ ಗಿಡದ ಬುಡದಲ್ಲಿ ಕುಳಿತನು.

ತನ್ನ ಕತೆಯನ್ನು ಹೇಳಿಕೊಳ್ಳುವ ಮೊದಲು ಅವನ ಕಣ್ಣುಗಳಿಂದ ನೀರು ಸುರಿಯಲಾರಂಭಿಸಿತು. ಗಂಟಲು ಬಿಗಿಯಿತು. ಅನಿವಾರ್ಯವೆಂದು ಅವನು ತಿಳಿದಿದ್ದ ಆ ದುಃಖವು ಅವನನ್ನು ಮಾತನಾಡಗೊಡಲಿಲ್ಲ. ಬಹು ಪ್ರಯಾಸದಿಂದ ಅವನು ಮಾತನ್ನು ಪ್ರಾರಂಭಿಸಿದನು. "ಪುಣ್ಯಾತ್ಮನೇ, ಪೂರ್ಣಭದ್ರನೆಂದು ನನ್ನ ಹೆಸರು. ನಮ್ಮ ತಂದೆಯು ಬಹಳ ಶ್ರದ್ಧೆಯಿಂದ ನನ್ನನ್ನು ಸಾಕಿದನು. ಆದರೇನು? ವಿಧಿಯನ್ನು ಮೀರುವವರಾರು? ಅದೃಷ್ಟ ವಶದಿಂದ ಕಳ್ಳನಾದೆ. ಈ ಕಾಶೀಪಟ್ಟಣದಲ್ಲಿ ವೈಶ್ಯ ಶ್ರೇಷ್ಠ ನೊಬ್ಬನ ಮನೆಯಲ್ಲಿ ಕಳ್ಳತನ ಮಾಡುತ್ತಿದ್ದಾಗ ಹಣದೊಂದಿಗೆ ಸಿಕ್ಕಿಬಿದ್ದೆನು. ನನ್ನನ್ನು ಸೆರೆಹಿಡಿದು ರಾಜಾಸ್ಥಾನಕ್ಕೆ ಒಯ್ದರು. ಆನೆಯ ಕೈಯಿಂದ ನನ್ನನ್ನು ಸಾಯಿಸುವಂತೆ ತೀರ್ಪಾಯಿತು. ಅರಮನೆಯ ಬಾಗಿಲಲ್ಲಿ ಜನರು ನೆರೆದಿದ್ದರು. ಉಪ್ಪರಿಗೆಯಲ್ಲಿ ಅಮಾತ್ಯನಾದ ಕಾಮಪಾಲನು ಕುಳಿತಿದ್ದನು. ನನ್ನ ಮೃತ್ಯುವಾದ ಮೃತ್ಯುವಿಜಯವೆಂಬ ಆನೆಯನ್ನು ಮಾವಟಿಗನು ಕರೆ ತಂದನು. ಕೂಗುವ ಜನರ ಶಬ್ದ, ಅದಕ್ಕೆ ಇಮ್ಮಡಿಯಾದ ಕೊರಳ ಗಂಟೆಗಳ ಶಬ್ದ – ಇವುಗಳ ನಡುವೆ ಆನೆಯು ಕೋಪಗೊಂಡು ಸೊಂಡಿಲನ್ನು ಸುತ್ತಿ ಮುಂದಕ್ಕೆ ಬಂದಿತು. ನಾನು ಹೆದರದೆ ಅದನ್ನು ಎದುರಿಸಿದೆ. ತೊಲೆಯ ಎರಡು ರಂಧ್ರಗಳಲ್ಲೂ ನನ್ನ ಎರಡು ತೋಳುಗಳನ್ನೂ ಸೇರಿಸಿ ಆ ತೊಲೆ ಯಿಂದ ಅದನ್ನು ಹೊಡೆದೆನು. ಒಂದು ಸಲ ಹಿಮ್ಮೆಟ್ಟಿದ ಆ ಆನೆಯು ಮಾವಟಿಗನಿಂದ ಪ್ರೇರಿತವಾಗಿ ಮತ್ತೆ ಕೋಪದಿಂದ ಮುನ್ನುಗ್ಗಿತು. ನಾನೂ ರೋಷದಿಂದ ನನ್ನ ಬಲವನ್ನು ಉಪಯೋಗಿಸಿ ಹೊಡೆದೆನು. ಅದು ಹಿಂದಕ್ಕೆ ಸರಿಯಿತು. ಅದರ ಮೇಲೆ ಕುಳಿತಿದ್ದ ಮಾವಟಿಗನನ್ನು ಕೆಳಕ್ಕೆ

ಎಳೆದನು. ಕುಪಿತನಾದ ಮಾವಟಿಗನು ಕುಂಭಸ್ಥಳದಲ್ಲಿ ಅಂಕುಶದಿಂದ ಚುಚ್ಚಿ ಮನಸ್ಸಿಲ್ಲದ ಆನೆಯನ್ನು ನನ್ನೆದುರು ಬರುವಂತೆ ಮಾಡಿದನು. "ಈ ದುರ್ಬಲವಾದ ಆನೆಯನ್ನು ಹಿಂದಕ್ಕೆ ತೆಗೆದುಕೊಂಡುಹೋಗು. ಮತ್ತೊಂದು ಗಜಪತಿಯನ್ನು ಬರಮಾಡು. ಅದರೊಂದಿಗೆ ಮುಹೂರ್ತಕಾಲ ಹೋರಾಡಿ ನಾನು ನನ್ನ ಗತಿಯನ್ನು ಹೊಂದುತ್ತೇನೆ" ಎಂದೆನು. ಈ ನನ್ನ ಗರ್ಜನೆಯನ್ನು ಕೇಳಿ ಹೆದರಿದ ಆನೆಯು ಮಾವಟಿಗನ ಅಂಕುಶಕ್ಕೂ ಸಗ್ಗದೆ ಹಿಂದಕ್ಕೆ ಓಡಿಹೋಯಿತು. ಇದನ್ನೆಲ್ಲ ನೋಡುತ್ತಿದ್ದ ಕಾಮಪಾಲನು ಆಶ್ಚರ್ಯಪಟ್ಟು ನನ್ನನ್ನು ಬಳಿಗೆ ಕರೆದನು. "ಅಯ್ಯಾ, ನೀನು ಮಹಾ ಬಲಿಷ್ಠನು. ಹಿಂಸಾವಿಹಾರಿಯಾದ ಮೃತ್ಯು ವಿಜಯವನ್ನೇ ಜಯಿಸಿದೆ. ಈ ಕೆಟ್ಟ ಕೆಲಸವನ್ನು ಬಿಡು. ನಮ್ಮನ್ನಾಶ್ರಯಿಸಿ ಉತ್ತಮವೃತ್ತಿಯಿಂದ ಬದುಕು. ಹಾಗೆ ಜೀವಿಸುವುದರಲ್ಲಿ ನಿನಗೆ ತೊಂದರೆಯಾದರೂ ಏನು?" ಎಂದನು. ನಾನು ಪಶ್ಚಾತ್ತಾಪ ಪಟ್ಟು ಹಾಗೆಯೇ ಆಗಲೆಂದು ವಿಜ್ಞಾಪಿಸಿ ದೆನು. ಅಂದಿನಿಂದ ಕಾಮಪಾಲನು ನನ್ನ ಪ್ರಾಣಮಿತ್ರನಾದನು.

"ನನ್ನಂತಹ ಅಲ್ಪ ಮನುಷ್ಯನಲ್ಲೂ ಪ್ರೀತಿಮಾಡುವ ಬಂಧುವೆಂದರೆ ಆ ಮಂತ್ರಿಯಾದ ಕಾಮಪಾಲನು. ಅವನ ಪ್ರೀತಿಗೆ ನಾನು ಮಾರುಹೋಗಿ ದ್ದೇನೆ. ಇತ್ತೀಚೆಗೆ ಚಂಡಿಕೋರರ ತೆಕ್ಕೆಗೆ ಸಿಕ್ಕಿ ಆ ಯುವಕ ರಾಜನಾದ ಸಿಂಹಘೋಷನು ಆ ಸಾಧುವಾದ ಮಂತ್ರಿಯನ್ನು ತನ್ನ ಭಟರಿಂದ ಹಿಡಿಸಿ ಸೆರೆಯಲ್ಲಿಟ್ಟಿರುವನು. ಅವನನ್ನು ರಾಜದ್ರೋಹಿಯೆಂದು ಅರಸನು ತಿಳಿದಂತೆ ಕಾಣುತ್ತದೆ. ಇಂದು ಚೌಕಗಳಲ್ಲೆಲ್ಲ ಅವನ ದೋಷಗಳನ್ನು ಎಲ್ಲರಿಗೂ ತಿಳಿಯುವಂತೆ ಕೂಗಿಹೇಳಿ ಅವನ ಕಣ್ಣುಗಳನ್ನು ಕೀಳಬೇಕೆಂದು ದೊರೆಯು ಆಜ್ಞಾಪಿಸಿರುವನು. ಕೇವಲ ಕಣ್ಣುಗಳನ್ನು ಕೀಳುವುದಷ್ಟೇ ಅಲ್ಲ. ಅದರಿಂದ ಅವನ ಪ್ರಾಣಹೋಗುವಂತಾಗಬೇಕೆಂದು ಅಪ್ಪಣೆಮಾಡಿರುವನು. ನನಗೆ ಅಷ್ಟೊಂದು ಸಹಾಯಮಾಡಿದ ಆತನನ್ನು ಈ ಆಪತ್ಕಾಲದಲ್ಲಿ ಹೇಗಾದರೂ ಉಳಿಸಬೇಕೆಂದು ಎಷ್ಟೋ ಯೋಚಿಸಿದೆನು. ಅದು ಸಾಧ್ಯವಲ್ಲವೆಂದು ಅರಿತೆನು. ಕೊನೆಗೆ ಉಳಿದುದು ಒಂದೇ ದಾರಿ. ಇಂತಹ ಏಕಾಂತ ಸ್ಥಳದಲ್ಲಿ ಕುಳಿತು ಮನಸ್ಸು ದಣಿಯುವವರೆಗೆ ಅತ್ತು ಕಣ್ಣೀರು ಸುರಿಸಿ ಆ ಸಜ್ಜನನ ಎದುರಿನಲ್ಲಿ ನಾನೂ ನನ್ನ ಪ್ರಾಣಗಳನ್ನು ಮುಗಿಸಿಕೊಳ್ಳುವುದು.

ನನ್ನ ಮತ್ತು ಆತನ ಆ ಅಪಾರವಾದ ಸ್ನೇಹಕ್ಕೆ ಇದೇ ತಕ್ಕ ಕಾಣಿಕೆಯೆಂದೇ ನಿಶ್ಚಯಿಸಿದ್ದೇನೆ. ಅದಕ್ಕಾಗಿಯೇ ಈ ಉಡುಪನ್ನು ಧರಿಸುತ್ತಿರುವುದು.

ತರುಣನ ಕಣ್ಣುಗಳಲ್ಲಿ ನೀರು ಸೇರಿತು. ಅವನ ಬಾಯಿಯಿಂದ ಮಾತು ಹೊರಡದಾಯಿತು. ಸ್ವಲ್ಪ ಹೊತ್ತು ತಲೆಯನ್ನು ತಗ್ಗಿಸಿ ಅವನು ತನ್ನ ಬಟ್ಟೆಯ ಸೆರಗಿನಿಂದ ಕಣ್ಣೀರನ್ನು ವರೆಸಿಕೊಂಡನು. ತನ್ನ ತಂದೆಯ ಈ ಪ್ರಾಣಾಪಾಯವನ್ನು ತಪ್ಪಿಸುವುದೆಂತು ? ಎಂಬುದೇ ಅವನ ಮನಸ್ಸಿನಲ್ಲೆಲ್ಲ ಮನೆಮಾಡಿತು. ಈ ಅಪರಿಚಿತನು ಕಣ್ಣೀರು ಸುರಿಸುವುದೇಕೆಂದು ಪೂರ್ಣ ಭದ್ರನಿಗೆ ತಿಳಿಯಲಿಲ್ಲ. ಸಂಬಂಧವಿಲ್ಲದವರ ದುಃಖದಲ್ಲಿ ಹೀಗೆ ಕಣ್ಣೀರು ಬಿಡುವ ಸಾಧುಗಳಿರುವರೇ ! ಎಂದವನು ಆಶ್ಚರ್ಯಪಟ್ಟನು. ಸ್ವಲ್ಪ ಹೊತ್ತು ಇಬ್ಬರೂ ಮಾತನಾಡದೆ ಮೌನವಾಗಿದ್ದರು.

ದುಃಖದ ಆವೇಗವು ಸ್ವಲ್ಪ ಕಡಿಮೆಯಾದ ಮೇಲೆ ಯುವಕನು ತಲೆ ಯೆತ್ತಿದನು. ಒಮ್ಮೆ ಪೂರ್ಣಭದ್ರನ ಕಡೆಗೆ ನೋಡಿ “ಅಕಾರಣ ಮಿತ್ರನೇ, ನಿನ್ನಲ್ಲಿ ಮರೆಮಾಚತಕ್ಕದ್ದೇನಿದೆ ? ಆ ನಿನ್ನ ಪರಮಮಿತ್ರನಾದ ಕಾಮ ಪಾಲನುಂಟಷ್ಟೆ. ಅವನ ಪುತ್ರನಾದ ಅರ್ಥಪಾಲನೇ ನಾನು. ಕಾಂತಿಮತಿ ಯಲ್ಲಿ ಜನಿಸಿದ ನಾನು ಯಕ್ಷಕನ್ಯೆಯ ಕೈಗೆಸಿಕ್ಕಿ ವಸುಮತಿಯ ಬಳಿಯಲ್ಲಿ ಬಳೆದೆನು. ರಾಜವಾಹನನ ಪಾದ ಶುಶ್ರೂಷೆಗೆಂದು ಹೊರಟವನು ಅವನನ್ನು ಕಾಣದೆ ಹುಡುಕಿಕೊಂಡು ಈ ನಗರಕ್ಕೆ ಬಂದೆನು. ಇಲ್ಲಿ ಅಕಸ್ಮಾತ್ತಾಗಿ ನಿನ್ನನ್ನು ನೋಡಿದೆನು. ಗಂಗಾಸ್ನಾನದ ಫಲವು ಈಗಲೇ ಲಭಿಸಿತು. ಅತ್ಯುತ್ಕಟವಾದ ಪುಣ್ಯದಿಂದ ಇಹಲೋಕದಲ್ಲೇ ಫಲವನ್ನು ಹೊಂದುತ್ತಾರೆಂಬ ನಾಣ್ನುಡಿ ನನ್ನ ವಿಷಯದಲ್ಲಿ ನಿಜವಾಯಿತು. ಈಗ ನಮ್ಮ ತಂದೆಯ ಪ್ರಾಣಗಳನ್ನು ಉಳಿಸುವುದು ಹೇಗೆಂದು ಯೋಚಿಸುತ್ತಿದ್ದೇನೆ. ಸಾವಿರಾರು ಭಟರು ಕತ್ತಿಗಳನ್ನು ಹಿಡಿದು ಬಂದರೂ ಅವರನ್ನು ಎದುರಿಸಿ ತಂದೆಯ ಪ್ರಾಣ ಗಳನ್ನು ಉಳಿಸಬಲ್ಲೆ. ಆದರೆ ಆ ಸಮೂಹದಲ್ಲಿ ಯಾವನಾದರೂ ನನ್ನ ತಂದೆಯ ಮೇಲೆ ಶಸ್ತ್ರವನ್ನು ಉಪಯೋಗಿಸಿದ್ದೇ ಆದರೆ ನನ್ನ ಪ್ರಯತ್ನ ವೆಲ್ಲಾ ವ್ಯರ್ಥವಾಗುವುದು. ಏನು ಮಾಡಲಿ............?”

ಇನ್ನೂ ತರುಣನ ಮಾತು ಮುಗಿದಿರಲಿಲ್ಲ. ಹಠಾತ್ತನೆ ಅವನ ದೃಷ್ಟಿಯು ಪ್ರಾಕಾರದ ಗೋಡೆಯ ಕಡೆಗೆ ಹೋಯಿತು. ಹಳೆಯ ಗೋಡೆ

ಯಲ್ಲಿ ಶಿಥಿಲವಾಗಿದ್ದ ಕಲ್ಲುಗಳ ನಡುವೆ ಇದ್ದ ಬಿರುಕಿನಿಂದ ಒಂದು ಹಾವು ತನ್ನ ಮೂತಿಯನ್ನು ಮುಂದೆ ಚಾಚಿತು. ಬರುಬರುತ್ತಾ ಸ್ವಲ್ಪ ದೇಹವೂ ಈಚೆಗೆ ಬಂದಿತು. ಅದು ಸ್ವಲ್ಪಹೊತ್ತು ಗೋಡೆಯ ಮೇಲೆ ಇಳಿ ಬಿದ್ದಂತೆ ತೂಗಾಡಿ ತನ್ನ ಹೆಡೆಯನ್ನು ಬಿಚ್ಚಿ ಮೇಲ್ಮುಖವಾಗಿ ಆಡಿಸಲಾರಂಭಿಸಿತು. ಪೂರ್ಣಭದ್ರನು ಅಲ್ಲಿಂದ ಹೊರಡುವುದರಲ್ಲಿದ್ದನು. ಅಷ್ಟರಲ್ಲಿ ಆ ತರುಣನು ಅವನನ್ನು ತನ್ನ ಎಡಗೈಯಿಂದ ಹಿಡಿದುಕೊಂಡು ತನ್ನ ಹೊದಿಕೆಯ ಸೆರಗನ್ನು ಸುತ್ತುತ್ತಾ ಏನನ್ನೋ ಜಪಿಸತೊಡಗಿದನು. ಹಾವಿನ ಆಟವು ಸ್ವಲ್ಪ ಸ್ವಲ್ಪ ಕಡಿಮೆಯಾಗುತ್ತ ಬಂದಿತು. ಕೊನೆಗೆ ಆ ಪ್ರಾಣಿಯು ತನ್ನ ದೇಹವನ್ನು ಆಡಿಸಲಾರದೆ ಚಾಚಿದ್ದ ಮೂತಿಯನ್ನು ಜೋಲು ಹಾಕಿ ಸ್ತಬ್ಧವಾಗಿ ಇದ್ದು ಬಿಟ್ಟಿತು. ಪೂರ್ಣಭದ್ರನಿಗೆ ಕಾರಣವು ತಿಳಿಯದೆ ಹೋಗಲಿಲ್ಲ. ಆ ತರುಣನು ಹಾವಿನ ಮಂತ್ರವನ್ನು ಜಪಿಸಿದುದರಿಂದ ಶಕ್ತಿಕುಗ್ಗಿ ಹಾವು ನಿಶ್ಚೇಷ್ಟಿತವಾಯಿತೆಂದು ಅವನು ತಿಳಿದನು.

ತರುಣನು ಸರ್ಪಮಂತ್ರವನ್ನು ಕಲಿತು ಸಿದ್ಧಿಯನ್ನು ಪಡೆದಿದ್ದುದು ಇಂದು ಉಪಯೋಗಕ್ಕೆ ಬಂದಿತು. ತರುಣನ ಆನಂದಕ್ಕೆ ಪಾರವಿರಲಿಲ್ಲ. ಈ ಹಾವಿನ ಸಹಾಯದಿಂದಲೇ ತನ್ನ ತಂದೆಯನ್ನು ಉಳಿಸಬಹುದೆಂದು ಅವನು ಯೋಚಿಸಿದನು. ಕೂಡಲೆ ಕುಳಿತಿದ್ದ ಸ್ಥಳದಿಂದೆದ್ದು ಹೋಗಿ ನಿರ್ಭಯನಾಗಿ ಆ ದುಷ್ಟಪ್ರಾಣಿಯ ಮೂತಿಯನ್ನು ಹಿಡಿದು ಹುಡುಗನು ಹಗ್ಗವನ್ನು ಎಳೆಯುವಂತೆ ಅದರ ಉದ್ದವಾದ ದೇಹವನ್ನು ಹೊರಕ್ಕೆ ಎಳೆದನು. ಆಹಾ! ಮಂತ್ರೌಷಧಿಗಳ ಮಹಿಮೆಗೆ ತಡೆಯುಂಟೆ! ಒಂದು ಬಾರಿಗಿಂತ ಹೆಚ್ಚು ನೀಳವಾದ ಆ ಕೃಷ್ಣಸರ್ಪವು ನಿರ್ವೀರ್ಯವಾಗಿ ಆ ತರುಣನ ಕೈಯ ಹಗ್ಗವಾಯಿತು. ಎಡಗೈಯಲ್ಲಿ ಮೂತಿಯನ್ನು ಹಿಡಿದು ಮಿಕ್ಕ ಅದರ ದೇಹವನ್ನು ಅದೇ ತೋಳಿಗೆ ಸುತ್ತು ಹಾಕಿಕೊಂಡು ಆ ಯುವಕನು ಮೊದಲು ಕುಳಿತಿದ್ದ ಸ್ಥಳಕ್ಕೆ ಬಂದನು. ಅವನು ಸಮೀಪಿಸಿದಂತೆಲ್ಲ ಪೂರ್ಣಭದ್ರನು ಹಿಂದಕ್ಕೆ ಸರಿಯುತ್ತಿದ್ದನು. ಇದನ್ನು ನೋಡಿ ಆ ತರುಣನು ಗಹಗಹಿಸಿ ನಕ್ಕು ಹೆದರಬೇಡವೆಂದು ಸನ್ನೆಮಾಡಿದನು. ಮುಂದೆ ಬಂದು ಅವನ ಬೆನ್ನನ್ನು ಬಲಗೈಯಿಂದ ಚಪ್ಪರಿಸಿ "ಭದ್ರ! ರೊಟ್ಟಿಯು ಜಾರಿ ತುಪ್ಪದಲ್ಲಿ ಬಿದ್ದಂತಾಯಿತು. ನಮ್ಮ ಮನೋರಥವು

ಸಿದ್ಧಿಯಾಯಿತೆಂದು ತಿಳಿ. ನನ್ನ ಮಂತ್ರಸಿದ್ಧಿಯನ್ನಾದರೂ ನೋಡಿ ದೆಯಾ? ಪ್ರಾಣಿಯು ಇಂತಹ ಕ್ರೂರ ಸಾಧುವಿಗಿಂತ ಸಾಧುವಾಗಿ ಕೈಯಲ್ಲಿರುವುದಲ್ಲವೆ? ಇಷ್ಟೇ ಅಲ್ಲ, ಎಂತಹ ಹಾವಿನ ವಿಷವನ್ನಾದರೂ ಸ್ತಂಭಿಸಿ ಸರ್ಪದಷ್ಟನನ್ನು ನಾನು ಬದುಕಿಸಬಲ್ಲೆ. ಬಹಳ ಹೊತ್ತು ಮೂರ್ಛಿತನಾಗಿ ಸತ್ತಂತೆ ಬಿದ್ದಿದ್ದರೂ ಉಳಿಸಬಲ್ಲೆ. ಈಗ ನೀನು ನನಗೊಂದು ಉಪಕಾರವನ್ನು ಮಾಡು. ಈ ನಿನ್ನ ಸಾಹಸವನ್ನು ಬಿಡು. ನಮ್ಮ ತಾಯಿಯ ಬಳಿಗೆ ಹೋಗಿ ಧೈರ್ಯದಿಂದ ನಾನು ಹೇಳಿದಂತೆ ಮಾಡಲು ಆಕೆಯನ್ನು ಪ್ರಾರ್ಥಿಸು. ಅದೋ ಆಗಲೇ ತಮಟೆಯ ಶಬ್ದ ಕೇಳಿಬರುತ್ತಿದೆ. ಹೊರಡು" ಎಂದು ಕಿವಿಯಲ್ಲಿ ಏನನ್ನೋ ಉಸಿರಿದನು. ಪೂರ್ಣಭದ್ರನ ಮುಖದಲ್ಲಿ ಭಯವೂ ಆಶ್ಚರ್ಯವೂ ಸಂತೋಷದೊಂದಿಗೆ ಹೊರಹೊಮ್ಮಿದುವು. ಅವನು ಅಲ್ಲಿಂದ ಹೊರಟನು.

ಹೋಗುತ್ತಾ ದಾರಿಯಲ್ಲವನು "ಇದು ಅತ್ಯಂತ ಸಾಹಸವು. ಎಲ್ಲಿ ಯಾದರೂ ಬೆಂಕಿಯೊಡನೆ ಸರಸವಾಡುವರಿರುವರೇ? ಈ ವಿಷಪರೀಕ್ಷೆ ಯಾದರೂ ಏನು? ಆಗಲಿ. ತರುಣನಿಗೆ ತನ್ನ ವಿದ್ಯಾಬಲದಲ್ಲಿ ನಂಬಿಕೆ ಯಿಲ್ಲದಿದ್ದಲ್ಲಿ ಇಂತಹ ಕೆಲಸಕ್ಕೆ ಮನಮಾಡುತಿದ್ದನೇ?" ಎಂದು ಆಲೋಚಿಸು ತ್ತಿದ್ದನು. ಪೂರ್ಣಭದ್ರನು ಕಣ್ಮರೆಯಾದ ಕೂಡಲೆ ಆ ಯುವಕನು ಬಟ್ಟೆ ಯನ್ನು ಸರಿಯಾಗಿ ಹೊದ್ದುಕೊಂಡು ಶಬ್ದ ಬರುತ್ತಿದ್ದ ಕಡೆಗೆ ವೇಗವಾಗಿ ನಡೆದನು.

ದೊಡ್ಡ ರಾಜಬೀದಿ. ಬೀದಿಯ ಎರಡು ಪಕ್ಕಗಳಲ್ಲೂ ದೊಡ್ಡದೊಡ್ಡ ಮರಗಳ ಸಾಲಿದ್ದಿತು. ಆ ಮರಗಳ ನೆರಳಿನಿಂದ ರಸ್ತೆಯು ನಡುಹಗಲಿನಲ್ಲೂ ಬಿಸಿಲ ತಾಪಕ್ಕೆ ಎಡೆಗುಡದೆ ತಣ್ಣಗೆ ಇರುತ್ತಿತ್ತು. ಬೀದಿಯ ತುಂಬ ಕಿಕ್ಕಿರಿದು ಜನ ತುಂಬಿದ್ದರು. ಆ ಜನಸಂದಣಿಯ ಮಧ್ಯದಲ್ಲಿ ತಮಟೆಯ ಶಬ್ದವು ಆಗಾಗ ಕೇಳಬರುತ್ತಿತ್ತು. ತಮಟೆಯ ಸದ್ದು ಕೇಳಿಬರುತ್ತಿದ್ದಷ್ಟು ಹೊತ್ತೂ ಜನವು ಮುಂದಕ್ಕೆ ಹೋಗುತ್ತ, ಸಪ್ಪಳವು ನಿಂತಕೂಡಲೆ ಗುಂಪು ಕಟ್ಟಿಕೊಂಡು ನಿಲ್ಲುತ್ತಿದ್ದರು. ನಾಲ್ಕು ರಸ್ತೆಗಳು ಸಂಧಿಸುವ ಸ್ಥಳದಲ್ಲಿ ಜನದ ಗುಂಪು ಮತ್ತಷ್ಟು ಹಿರಿದಾಯಿತು. ಕೆಲ ಜನರು ಮರಗಳನ್ನು ಹತ್ತಿ ಕುಳಿತು ನೋಡಿತ್ತಿದ್ದರು. ತಮಟೆಯ ಶಬ್ದವನ್ನು ನಿಲ್ಲಿಸಿ ರಾಜಭಟರು

ಘೋಷಿಸಲಾರಂಭಿಸಿದರು. ಎತ್ತರವಾದ ವೇದಿಕೆಯ ಮೇಲೆ ಕಾಮಪಾಲನನ್ನು ತಂದು ನಿಲ್ಲಿಸಿದರು. ಅವನ ಎರಡು ಕೈಗಳನ್ನೂ ಹಿಂದಕ್ಕೆ ಕಟ್ಟಿದ್ದರು. ಜನರ ಗದ್ದಲವಂತೂ ಹೇಳತೀರದು. ಮಾತಂಗನು ಕಾಮಪಾಲನ ಪಕ್ಕದಲ್ಲಿ ವೇದಿಕೆಯ ಮೇಲೆ ನಿಂತು ಹೀಗೆ ಗಟ್ಟಿಯಾಗಿ ಹೇಳ ತೊಡಗಿದನು.

"ಈ ವಿಶ್ವಾಸಘಾತುಕನಾದ ಮಂತ್ರಿಯನ್ನಾದರೂ ನೋಡಿ! ಇವನ ಹೆಸರು ಕಾಮಪಾಲನೆಂದು. ಇವನು ತಾನೇ ರಾಜನಾಗಬೇಕೆಂಬ ದುರಾಶೆಯಿಂದ ರಾಜನಾದ ಚಂಡಸಿಂಹನನ್ನೂ ಯುವರಾಜನಾದ ಚಂಡಘೋಷನನ್ನೂ ವಿಷಪ್ರಯೋಗ ಮಾಡಿಸಿ ಕೊಲ್ಲಿಸಿರುವನು. ಈಗಲಾದರೋ ಪೂರ್ಣಯವ್ವನವಂತನಾದ ಸಿಂಹಘೋಷನನ್ನೂ ಕೊಲ್ಲಬೇಕೆಂಬೆಳಸಿ ಆಪ್ತರೆಂದು ತಿಳಿದಿದ್ದ ಶಿವನಾಗ, ಅಂಗಾರವರ್ಷರೆಂಬ ಮಂತ್ರಿಗಳೊಡನೆ ರಹಸ್ಯವಾಗಿ ಆಲೋಚಿಸಿದನು. ಸ್ವಾಮಿ ಭಕ್ತರಾದ ಅವರು ತಮ್ಮ ಸ್ವಾಮಿಯಲ್ಲಿ ಮಾಡುವ ದ್ರೋಹವನ್ನು ಕಂಡು ತಡೆಯಲಾರದೆ ಈ ನೀಚನ ಗುಟ್ಟನ್ನು ಹೊರಗೆಡವಿದರು. ಅನಂತರ ದ್ರೋಹಿಯಾದ ಇವನನ್ನು ವಿಚಾರಣೆಗೆ ಗುರಿಪಡಿಸಿದುದಾಯಿತು. ನ್ಯಾಯಾಧಿಪತಿಯು ವಿಶ್ವಾಸಘಾತುಕನಾದ ಬ್ರಾಹ್ಮಣನಿಗೆ ಕಗ್ಗತ್ತಲೆಯಲ್ಲಿ ಪ್ರವೇಶಮಾಡಿಸಬೇಕೆಂದು ತೀರ್ಪನ್ನಿತ್ತಿರುವನು. ಆದ್ದರಿಂದ ಇವನ ಕಣ್ಣುಗಳನ್ನು ಕಿತ್ತು ಶಾಶ್ವತವಾದ ಕಗ್ಗತಲೆಯಲ್ಲಿ ಇರುವಂತೆ ಮಾಡುವುದಕ್ಕಾಗಿ ಇವನನ್ನು ಕರೆದುಕೊಂಡು ಹೋಗುತ್ತಿದ್ದೇವೆ. ಮತ್ತೆ ಯಾವನಾದರೂ ಹೀಗೆಯೇ ಅನ್ಯಾಯದ ಕೆಲಸವನ್ನು ಮಾಡಿದ್ದೇ ಆದರೆ ರಾಜನು ತಕ್ಕ ಶಿಕ್ಷೆಯನ್ನು ಮಾಡುತ್ತಾನೆಂಬುದು ಎಲ್ಲರಿಗೂ ತಿಳಿದಿರಲಿ."

ಮತ್ತೆ ವಾದ್ಯದ ಧ್ವನಿ ಪ್ರಾರಂಭವಾಯಿತು. ಎಲ್ಲೆಲ್ಲಿಯೂ ಜನರ ಗದ್ದಲ. ನಗರರಕ್ಷಕರು ಕಾಮಪಾಲನನ್ನು ವೇದಿಕೆಯಿಂದ ಕೆಳಗಿಳಿಸಿದರು. ಬೋನಿನಲ್ಲಿ ಸಿಕ್ಕಿಬಿದ್ದ ಸಿಂಹದಂತೆ ಆ ಮಂತ್ರಿಯು ಅಡಗಿದ ಕ್ರೋಧದಿಂದ ಅವರನ್ನು ಹಿಂಬಾಲಿಸಿದನು. ಕೈಯಲ್ಲಿ ಚಮ್ಮಟಿಗೆಯನ್ನು ಹಿಡಿದು ಮಾತಂಗನು ಹಿಂದೆ ಬರುತ್ತಿದ್ದನು. ಜನರಲ್ಲಿ ಕೆಲವರು "ಎಲ್ಲಿಯಾದರೂ ಉಂಟೆ? ಈ ಮಹಾನುಭಾವನು ಇಂಥ ಅಕೃತ್ಯವನ್ನು ಮಾಡಲೆಳಸುವನೇ? ಚಿಕ್ಕಂದಿನಿಂದ ರಾಜಪುತ್ರನನ್ನು ಕಾಪಾಡಿ ಈಗ ರಾಜನನ್ನಾಗಿ ಮಾಡಿರುವನಲ್ಲವೇ? ಹಾಗೆ ರಾಜನನ್ನು ಕೊಲ್ಲಬೇಕೆಂದಿದ್ದಲ್ಲಿ ಚಿಕ್ಕಂದಿನಲ್ಲೇ ಅವನನ್ನು

ಮುಗಿಸಲಾಗುತ್ತಿರಲಿಲ್ಲವೇ? ಇದು ಯಾರೋ ಚಾಡಿಕೋರರು ಹೂಡಿರುವ ಪಿತೂರಿಯಿದ್ದಿರಬೇಕು. ಅನ್ಯಾಯವಾಗಿ ತರುಣರಾಜನು ಈ ಪಿಸುನರ ಮಾತಿಗೆ ಕಿವಿಗೊಟ್ಟು ಕೆಟ್ಟುಹೋಗುವನಲ್ಲ!" ಎಂದು ಹೇಳಿ ಕೊಳ್ಳುತ್ತಿದ್ದರು. ಇನ್ನು ಕೆಲವರು "ಕಣ್ಣು ಕೀಳುವುದು ಮಾತ್ರವಲ್ಲ. ಅವನ ಆಸ್ತಿಯೆಲ್ಲವನ್ನೂ ಮುಟ್ಟುಗೋಲು ಹಾಕಿ ರಾಜ್ಯಕ್ಕೆ ಸೇರಿಸಿಕೊಳ್ಳಬೇಕು. ಮನೆಯಲ್ಲೇ ಇಟ್ಟುಕೊಂಡು ಸಾಕಿದ್ದಕ್ಕೆ ಒಳ್ಳೆಯ ಪ್ರತಿಫಲ. ಅಳಿಯನು ಮನೆ ತೊಳೆ ಯುವನು ಎಂಬ ನಾಣ್ಣುಡಿ ಇವನಲ್ಲಿ ಅನ್ವರ್ಥವಾಯಿತು. ಮುದಿರಾಜನು ಇವನ ಕೈಬೊಂಬೆಯಾಗಿದ್ದು ಸತ್ತನು. ಯುವರಾಜನಂತೂ ಅಕಾಲ ಮೃತ್ಯು ವಿಗೆ ತುತ್ತಾದನು. ಇನ್ನು ಏನೂ ಅರಿಯದ ಈ ಹಸುಳೆ ರಾಜನ ವಿಷಯ ದಲ್ಲಿ ಏನೇನು ದ್ರೋಹವಾಚರಿಸಬೇಕೆಂದಿರುವನೋ ಬಲ್ಲವರಾರು? ದೈವ ದಿಂದ ರಾಜನು ಇಷ್ಟರಲ್ಲೇ ಎಚ್ಚತ್ತನಲ್ಲವೇ! ಅದೆಲ್ಲ ಪ್ರಜೆಗಳಾದ ನಮ್ಮ ಭಾಗ್ಯ" ಎಂದು ಮಂತ್ರಿಯನ್ನು ಮೂದಲಿಸುತ್ತ ಗುಂಪುಕಟ್ಟಿಕೊಂಡು ಹಿಂದೆ ಹೋಗುತ್ತಿದ್ದರು.

ಪ್ರತಿಯೊಂದು ಚೌಕದಲ್ಲಿಯೂ ನಿಂತು ಇದೇ ರೀತಿಯಲ್ಲಿ ಜನರನ್ನು ಸಂಬೋಧಿಸಿ ಮಾತಂಗನು ಘೋಷಿಸುತ್ತಿದ್ದನು.

ಜನರ ಗುಂಪು ಬರಬರುತ್ತ ವಿಶಾಲವಾದ ಒಂದು ಪ್ರದೇಶಕ್ಕೆ ಬಂದಿತು. ಆ ಹೊತ್ತಿಗಾಗಲೇ ಅಲ್ಲಿಗೆ ಎಷ್ಟೋ ಜನ ಬಂದು ನೆರೆದಿದ್ದರು. ಜನ ಸಂದಣಿಯು ಇಮ್ಮಡಿಸಿತು. ಆ ಘೋಷಣ ಸ್ಥಾನದಲ್ಲಿ ಒಂದು ದೊಡ್ಡ ಹುಣಿಸೆಯಮರ. ಅದರ ಕೊಂಬೆಗಳು ಉದ್ದವಾಗಿದ್ದು ಸುತ್ತಲೂ ಬಹು ದೂರ ನೆರಳನ್ನು ಕೊಡುತ್ತಿದ್ದುವು. ಆ ಪ್ರದೇಶದಲ್ಲಿ ಇನ್ನೂ ಅನೇಕ ಸಣ್ಣ ಸಣ್ಣ ಮರಗಳಿದ್ದುವು. ಜನರ ಸಮೂಹವು ಬಹಳವಾಗಿದ್ದುದರಿಂದ ನಡೆಯುವ ವಿಷಯವನ್ನು ಸರಿಯಾಗಿ ನೋಡಬೇಕೆಂಬ ಕುತೂಹಲದಿಂದ ಅನೇಕರು ಮರಗಳ ಮೇಲೆ ಹತ್ತಿಕುಳಿತರು. ಹಲಸಿನ ಮರದಲ್ಲಿ ಮೊದಲಿನಿಂದ ಕೊನೆಯವರೆಗೆ ಹಣ್ಣುಗಳು ಇಳಿಬಿದ್ದಿರುವಂತೆ ಕೊಂಬೆಗಳಲ್ಲಿ ಎಲ್ಲಿ ನೋಡಿದರೂ ಜನರು ಕುಳಿತಿದ್ದರು. ಆ ದೊಡ್ಡ ಹುಣಿಸೆಯ ಮರದ ಕೆಳಗೆ ಎತ್ತರವಾದ ಜಗುಲಿಯೊಂದಿತ್ತು. ಅದರ ಮೇಲೆ ಕಾಮಪಾಲನನ್ನು ನಗರ ರಕ್ಷಕರು ತಂದು ನಿಲ್ಲಿಸಿದರು. ಅವರನ್ನೇ ಹಿಂಬಾಲಿಸುತ್ತಿದ್ದ ಆ ತರುಣನು

ತಾನೂ ಸಾಮಾನ್ಯ ಪ್ರೇಕ್ಷಕನಂತೆ ಆ ಹುಣಿಸೆಯ ಮರವನ್ನು ಹತ್ತಿಕುಳಿತನು. ಅವನು ಕುಳಿತಿದ್ದ ಕೊಂಬೆಯ ಕೆಳಗೆ ಸರಿಯಾಗಿ ಅಪರಾಧಿಯಾದ ಮಂತ್ರಿಯನ್ನು ನಿಲ್ಲಿಸಿದ್ದರು. ಅವನ ಪಕ್ಕಗಳಲ್ಲಿ ನಗರರಕ್ಷಕರು ಜಾಗರೂಕರಾಗಿ ನಿಂತಿದ್ದರು. ಕಣ್ಣುಕೀಳಲು ಸಲಾಕಿಗಳನ್ನು ಸಿದ್ಧಪಡಿಸಿಕೊಂಡಿದ್ದ ಮಾತಂಗನು ಎದುರಿನಲ್ಲಿ ನಿಂತಿದ್ದನು.

ತಮಟೆಯ ಶಬ್ದವನ್ನು ನಿಲ್ಲಿಸಿದ ಮೇಲೆ ಮಾತಂಗನು ಎಲ್ಲರಿಗೂ ಕೇಳಿಸುವಂತೆ ಮತ್ತೆ ಅದೇ ಘೋಷಣೆಯನ್ನೇ ಘೋಷಿಸಿದನು. ಹೀಗೆ ಮೂರು ಸಲ ಹೇಳಿದ್ದಾಯಿತು. ಇನ್ನೇನು ಕಣ್ಣುಗಳನ್ನು ಚುಚ್ಚಬೇಕು, ಅಷ್ಟರಲ್ಲಿ ಮರದ ಮೇಲಿದ್ದ ತರುಣನು ಮಂತ್ರದ ಕಟ್ಟನ್ನು ಬಿಡಿಸಿ ಆ ನೀಳವಾದ ಕೃಷ್ಣಸರ್ಪವನ್ನು ಧಟ್ಟನೆ ತನ್ನ ತಂದೆಯ ತಲೆಯ ಮೇಲೆ ಎಸೆದನು. ಕೋಪದಿಂದ ಕಿಡಿಕಿಡಿಯಾಗಿದ್ದ ಆ ಸರ್ಪವು ಕಾಮಪಾಲನ ದೇಹದಲ್ಲಿ ಅನೇಕ ಕಡೆ ಕಚ್ಚಿ ಇಳಿದುಹೋಗುತ್ತಾ ಕಣ್ಣುಕೀಳಲಿದ್ದ ಚಂಡಾಲನನ್ನೂ ಕಚ್ಚಿ ವೇಗವಾಗಿ ಮುಂದಕ್ಕೆ ಸರಿಯಿತು. ಭಯಂಕರವಾದ ಆ ದುಷ್ಟಪ್ರಾಣಿಯನ್ನು ಕಂಡ ಜನರು ತಾವಾಗಿಯೇ ದೂರಸರಿದರು. ಹಾವು ಸರಸರನೆ ಹರಿದು ಹತ್ತಿರದಲ್ಲಿದ್ದ ಹುತ್ತದಲ್ಲಿ ಅಡಗಿಕೊಂಡಿತು.

ತರುಣನು ಕೂಡಲೆ ವಿಷವನ್ನು ಸ್ತಂಭಿಸುವ ಮಂತ್ರವನ್ನು ಜಪಿಸಿ ಆ ಮರದ ಕೊಂಬೆಯಿಂದ ಕೆಳಕ್ಕೆ ಧುಮುಕಿದನು. ನೋಡಲು ಬಂದಿದ್ದ ಜನರ ನಡುವೆ ತಾನೂ ಒಬ್ಬ ಸಾಮಾನ್ಯನಂತೆ ಇದ್ದುಕೊಂಡು ಮತ್ತೆ ಯಾರೂ ತನ್ನ ಮಂತ್ರವನ್ನು ಕೆಡಿಸದಂತೆ ಗಾಢವಾಗಿ ಜಪಿಸಲಾರಂಭಿಸಿದನು. ವಿಷವೇರಿದ ಕಾಮಪಾಲನು ಸತ್ತವನಂತೆ ಕೆಳಗೆ ಬಿದ್ದನು.

ಕೂಡಲೆ ಆ ಯುವಕನು ಅತಿಶಯವಾದ ಉತ್ಸಾಹದಿಂದ ಆ ಜನದ ನಡುವೆ ಕೂಗಿಕೊಳ್ಳಲಾರಂಭಿಸಿದನು. "ಸ್ವಾಮಿ ದ್ರೋಹಿಯನ್ನು ದೇವರೇ ಶಿಕ್ಷಿಸುತ್ತಾನೆಂಬುದು ನಿಜವಾದ ಮಾತಲ್ಲವೇ! ನೋಡಿ, ರಾಜನು ಕಣ್ಣು ಮಾತ್ರ ಕೀಳಬೇಕೆಂದು ಅಂದುಕೊಂಡಿದ್ದರೆ ವಿಧಿಯು ಅವನ ಪ್ರಾಣಗಳನ್ನೇ ಕಿತ್ತಿತು. ದ್ರೋಹಕ್ಕೆ ತಕ್ಕ ಶಿಕ್ಷೆಯಾಯಿತು" ಎಂದನು. ಕೆಲವರು ಆ ತರುಣನ ಕಡೆಗೆ ತಿರುಗಿ "ಅಯ್ಯಾ, ನೀನು ಹೇಳಿದ್ದು ಅಕ್ಷರಶಃ ನಿಜ. ಪಂಚಮಹಾಭೂತಗಳ ಅಂಶನಾದ ರಾಜನನ್ನು ದ್ವೇಷಿಸಿ ಬದುಕುವರಾರು?"

ಎಂದರು. ಮತ್ತೆ ಕೆಲವರು " ಯಾರಯ್ಯಾ ನೀನು ? ನಮ್ಮ ಅಮಾತ್ಯರ ವಿಷಯ ನಿನಗೇನುಗೊತ್ತು. ಅವರು ಸಾಧುಗಳಲ್ಲಿ ಸಾಧುಗಳು. ಅಂಧವರು ಕುರುಡರಾಗಿ ಬದುಕಿರುವುದಕ್ಕಿಂತ ಒಮ್ಮೆಯೇ ಪ್ರಾಣಬಿಟ್ಟು ಸುಖವಾಗಿರ ಲೆಂದು ದೈವವು ಅನುಕೂಲ ಪಡಿಸಿರುವುದು. ನೋಡು, ಕಣ್ಣುಕೀಳಹೋದ ಆ ನೀಚನ ಗತಿಯೇನಾಗಿದೆ. ಅವನೂ ಸತ್ತು ಬಿದ್ದಿದ್ದಾನೆ. ಇಷ್ಟರಿಂದಲೇ ತಿಳಿಯುವುದಿಲ್ಲವೆ ಒಳ್ಳೆಯವರಿಗೆ ಕೇಡು ಬಯಸಿದರೆ ತನಗೆ ಕೇಡು ತಪ್ಪ ದೆಂದು " ಎಂದು ಆ ತರುಣನನ್ನು ಧಿಕ್ಕರಿಸಿ ಮಾತನಾಡಿದರು.

ಆ ಸಮಯಕ್ಕೆ ರಾಜನೂ ಅಲ್ಲಿಗೆ ಬಂದುದರಿಂದ ಜನರು ದೂರ ಸರಿದು ನಿಂತರು. ನೆಲದ ಮೇಲೆ ಮೂರ್ಛೆಬಿದ್ದಿದ್ದ ಕಾಮಪಾಲನನ್ನು ಕಂಡು ದೊರೆಗೆ ತಾನು ಅಪವಾದದಿಂದ ತಪ್ಪಿಸಿಕೊಂಡೆನೆಂಬ ಧೈರ್ಯಬಂದು ಸಂತೋಷವಾಯಿತು. ಅಲ್ಲಿದ್ದವರನ್ನು ಕೇಳಿ ವಿಷಯವನ್ನು ವಿಸ್ತಾರವಾಗಿ ತಿಳಿದನು.

ಮುಂದೇನು ಮಾಡುವುದೆಂದು ರಾಜನು ಯೋಚಿಸುತ್ತಿರುವುದರೊಳ ಗಾಗಿ ಕಾಂತಿಮತಿಯ ಆಕ್ರಂದನ ಧ್ವನಿಯು ಕೇಳಿ ಬಂತು. ಪೂರ್ಣ ಭದ್ರನನ್ನು ಮುಂದುಮಾಡಿಕೊಂಡು ಬಿಕ್ಕಿಬಿಕ್ಕಿ ಅಳುತ್ತಾ ತನ್ನ ಆಪ್ತ ಗೆಳತಿಯರೊಂದಿಗೆ ರಾಜಪುತ್ರಿಯು ಬರುತ್ತಿದ್ದಳು. ಯಾರು ಎಷ್ಟು ಧೈರ್ಯ ಹೇಳಿದರೇನು ? ಕುಸುಮ ಸದೃಶವಾದ ಸ್ತ್ರೀಯರ ಹೃದಯವು ಇಂತಹ ಬೇಗೆ ಯಲ್ಲಿ ಬಾಡದಿರುವುದೇ ? ಕೆಲವು ಗೆಳತಿಯರನ್ನು ಮಾತ್ರ ಜೊತೆಗೆ ಕರೆದು ಕೊಂಡು ಬಂದ ಕಾಂತಿಮತಿಯು ಬಂದವಳೇ ಧೊಪ್ಪನೆ ನೆಲದ ಮೇಲೆ ಬಿದ್ದಳು. ಸ್ವಲ್ಪಹೊತ್ತು ಪ್ರಜ್ಞೆತಪ್ಪಿದಂತಾಗಿ ಎಚ್ಚತ್ತ ಆ ಅರಗುವರಿಯು ತನ್ನ ಪತಿಯ ಶವದ ಮೇಲೆ ಬಿದ್ದು ಅಳುತ್ತಾ " ನಾಥ, ಅಕಾಲ ಮೃತ್ಯುವಿಗೆ ತುತ್ತಾದೆಯಾ ? ಕಣ್ಣುಕೀಳಬೇಕೆಂದು ನ್ಯಾಯಾಧಿಪತಿಯು ತೀರ್ಪಿತ್ತಿದ್ದ ನಲ್ಲವೇ ? ಹಾಗೆ ಕುರುಡನಾಗಿಯಾದರೂ ನೀನು ಬದುಕಿರಬಾರದಿತ್ತೇ ? ಅಂಧ ನಾದರೇನು ? ಕಿವುಡನಾದರೇನು ? ಪತಿಯೆಂಬ ವಸ್ತುವು ಪತಿವ್ರತೆಯಾದ ಸತಿಗೆ ಸರ್ವಸ್ವವಲ್ಲವೇ ?" ಎಂದು ಮುಂತಾಗಿ ಪ್ರಲಪಿಸಿದಳು.

ರಾಜನು ಸಮಾಧಾನ ಮಾಡುವನಂತೆ " ತಾಯಿ, ನಾನೊಂದ ನೆನೆದರೆ ದೈವತಾಬೇರೊಂದು ನೆನೆಯಿತು. ಶ್ವಶುರ ಕುಲದ್ರೋಹಿಯಾದ ಈ ನಿನ್ನ

ಪತಿಯನ್ನು ನಿನಗಾಗಿ ಜೀವದಿಂದುಳಿಸಬೇಕೆಂದು ನಾನು ಪಟ್ಟ ಪ್ರಯತ್ನವು ವಿಫಲವಾಯಿತು. ಸರ್ಪದಷ್ಟನಾಗಿ ನಿನ್ನ ಪತಿಯು ಮೃತನಾದನು. ಹತ ಭಾಗ್ಯನಿಗೆ ಆಕಾಶವೇ ಹಾವನ್ನು ಸುರಿಸಿತು" ಎಂದನು.

ಕಲ್ಲುಮುಳ್ಳುಗಳಿಂದ ತುಂಬಿದ್ದ ಭೂಮಿಯ ಮೇಲೆ ಪತಿಯು ಬಿದ್ದಿದ್ದುದು ಅವಳ ಮನಸ್ಸಿಗೆ ಬಹಳ ನೋವನ್ನುಂಟುಮಾಡಿತು. ಪ್ರೀತಿ ಯಿಂದ ಅವಳು ತನ್ನ ಕೋಮಲವಾದ ತೊಡೆಯಲ್ಲಿ ಪತಿಯ ತಲೆಯನ್ನಿಟ್ಟು ಕೊಂಡಳು. ತನ್ನ ಎಡಗೈಯನ್ನು ಆತನ ತಲೆಯಕೆಳಗೆ ಆಸರೆಯಾಗಿಟ್ಟಳು. ಕಾಂತಿಯು ಸ್ವಲ್ಪವಾದರೂ ಕಡಿಮೆಯಾಗದಿದ್ದರೂ ಚೇಷ್ಟೆಯಿಲ್ಲದೆ ಕಣ್ಣು ಗಳನ್ನು ಮುಚ್ಚಿದ್ದ ಪತಿಯ ಮುಖವನ್ನು ಬಲಗೈಯಿಂದ ಸವರಿದಳವಳು. ನೆರಗಿನಿಂದ ಬೆವರಿನ ಹನಿಗಳನ್ನು ವರೆಸಿದಳು. ಅವಳ ಕಣ್ಣುಗಳಿಂದ ಧಾರಾ ಕಾರವಾಗಿ ನೀರು ಸುರಿಯುತ್ತಿತ್ತು. ಮಧ್ಯೆಮಧ್ಯೆ ಅದನ್ನು ವರೆಸಿ ಕೊಳ್ಳುತ್ತ ಮುಖವನ್ನು ತಗ್ಗಿಸಿ ರಾಜಪುತ್ರಿಯು ಯುವಕನಾದ ರಾಜನನ್ನು ಸಂಬೋಧಿಸಿ "ಮಹಾರಾಜನೇ, ಈ ನನ್ನ ಪತಿಯು ನಿನಗೆ ಅಥವಾ ನಿನ್ನ ಕುಲಕ್ಕೆ ಅಪಕಾರಮಾಡಿರುವನೋ ಇಲ್ಲವೋ ದೇವರಿಗೆ ಗೊತ್ತು. ನಾನು ಅದನ್ನು ಯೋಚಿಸ ತೊಡಗುವುದಿಲ್ಲ. ಯೋಚಿಸಿಯೂ ನನಗದರಿಂದ ಪ್ರಯೋಜನವಿಲ್ಲ. ನಮ್ಮ ತಂದೆಯಂತೂ ಈತನಿಗೆ ನನ್ನನ್ನು ಕೊಟ್ಟು ಮದುವೆ ಮಾಡಿರುವನು. ಮದುವೆಯಾದ ಪತಿಯನ್ನು ನಾನು ಅನುಸರಿಸ ದಿದ್ದರೆ ಹುಟ್ಟಿದ ನಿಮ್ಮ ವಂಶಕ್ಕೇ ಕಳಂಕತರುವೆನಲ್ಲವೇ? ಪತಿತನಾಗಲೀ ಪಾವನನಾಗಲೀ ಸತಿಯಾದವಳು ಮೃತಪತಿಯನ್ನು ಅನುಸರಿಸಬೇಕಾದದ್ದು ಧರ್ಮವಲ್ಲವೇ? ನೀನು ಈಗ ನನಗೆ ಮಹೋಪಕಾರ ಮಾಡಬೇಕೆಂದು ಇಷ್ಟಪಡುವೆಯಾದರೆ ನಾನು ನಿನ್ನನ್ನು ಬೇಡಿಕೊಳ್ಳುವುದಿಷ್ಟೇ. ಈ ದೇಹದ ಜೊತೆಯಲ್ಲಿ ನಾನೂ ಚಿತಿಯನ್ನೇರುವಂತೆ ನನಗೆ ಅನುಮತಿಯನ್ನು ಕೊಡು. ನಿನ್ನ ಕುಲಪುತ್ರಿಯ ಈ ಕೊನೆಯ ಕೋರಿಕೆಯನ್ನು ಸಲ್ಲಿಸಿಕೊಡು? ಎಂದು ಅಂಗಲಾಚಿದಳು.

ಸಿಂಹಘೋಷನು ತನ್ನಲ್ಲಿಯೇ ಹೀಗೆಂದು ಯೋಚಿಸತೊಡಗಿದನು. ದೈವದಿಂದ ನನಗೆ ಬರುತ್ತಿದ್ದ ಅಪವಾದವು ತಪ್ಪಿ ನಾನೀಗ ಒಳ್ಳೆಯವನಾಗಿ ದ್ದೇನೆ. ಈ ಶವದೊಂದಿಗೆ ಸಹಗಮನವನ್ನು ಬಯಸುವ ಈಕೆಗಾದರೂ

ಈ ಹೆಣವನ್ನು ಒಪ್ಪಿಸುವುದರಿಂದ ಮತ್ತಷ್ಟು ಯೋಗ್ಯನೆನಿಸಿಕೊಳ್ಳುತ್ತೇನೆ. ಹೀಗೆಂದು ಆಲೋಚಿಸಿ ಅಧಿಕಾರಿಗಳ ಕಡೆ ನೋಡಿ "ಈ ಶವವನ್ನು ಈಕೆಯ ವಶಕ್ಕೆ ಕೊಟ್ಟುಬಿಡಿ. ತನ್ನ ಕುಲದ ಘನತೆಗೆ ತಕ್ಕಂತೆ ಇವರೊಂದಿಗೆ ಸಹ ಗಮನವನ್ನು ರಾಜಪುತ್ರಿಯು ಆಚರಿಸಲಿ. ಸಹಗಮನ ಸಮಾರಂಭವು ಮುಗಿದ ಮೇಲೆ ಈ ದಂಪತಿಗಳಿಬ್ಬರಿಗೂ ಔರ್ಧ್ವದೇಹಿಕ ಸಂಸ್ಕಾರಗಳು ಚನ್ನಾಗಿ ನಡೆಯಲಿ" ಎಂದು ಆಜ್ಞಾಪಿಸಿದನು.

ಕೂಡಲೆ ಪೂರ್ಣಭದ್ರನು ಆ ಸ್ಥಳಕ್ಕೆ ಸ್ವಲ್ಪ ದೂರದಲ್ಲಿ ಜನರಿಲ್ಲದ ಸ್ಥಳದಲ್ಲಿ ದರ್ಭೆಗಳನ್ನು ಹಾಸಿ ಯುವಕನ ಸಹಾಯದಿಂದ ಶವವನ್ನು ತಂದು ಅಲ್ಲಿ ಮಲಗಿಸಿದನು. ರಾಜನು ತೃಪ್ತನಾಗಿ ಹಿಂತಿರುಗಿದನು. ಆತನ ಆಪ್ತ ವರ್ಗವು ಆತನನ್ನೇ ಅನುಸರಿಸಿತು. ಉಳಿದ ಜನರು ಮುಂದಿನ ಘೋರ ದೃಶ್ಯವನ್ನು ನೋಡಲಾರದೆ ತಮ್ಮ ತಮ್ಮ ಮನೆಗಳತ್ತ ಸಾಗಿದರು. ಸರ್ಪ ದಷ್ಟನಾದ ಮಾತಂಗನು ಮತ್ತೆ ಏಳಲೇ ಇಲ್ಲ.

ವಿಷಮೂರ್ಛಿತನಾಗಿದ್ದ ಕಾಮಪಾಲನ ಬಲಭಾಗದಲ್ಲಿ ಮಂತ್ರವಾದಿ ಯಾದ ಯುವಕನೂ, ಎಡಭಾಗದಲ್ಲಿ ಆಪ್ತಸ್ನೇಹಿತನಾದ ಪೂರ್ಣಭದ್ರನೂ ಕುಳಿತಿದ್ದರು. ಪೂರ್ಣಭದ್ರನಿಗೆ ತನ್ನ ಸ್ನೇಹಿತನು ಬದುಕುವನೋ ಇಲ್ಲವೋ ಎಂಬ ಸಂದೇಹವು ಬಲವಾಗಿತ್ತು. ಅವನು ತರುಣನ ಮುಖವನ್ನೇ ನೋಡುತ್ತ ಕೈಸನ್ನೆಯಿಂದ ಆ ದೇಹದಲ್ಲಿ ಜೀವವಿರುವುದೇ ಎಂದು ಪ್ರಶ್ನಿಸಿ ದನು. ತರುಣನು ಬಲವಾಗಿ ಸರ್ಪಮಂತ್ರವನ್ನು ಜಪಿಸುತ್ತಿದ್ದನಾದ್ದರಿಂದ ತಲೆಯನ್ನಲ್ಲಾಡಿಸಿ ಸ್ವಲ್ಪ ಹೊತ್ತು ತಾಳುವಂತೆ ಸನ್ನೆಮಾಡಿದನು. ಕೈಯಿಂದ ಭಯಪಡಬೇಕಾದ್ದಿಲ್ಲವೆಂದು ಸೂಚಿಸಿದನು.

ಕಾಂತಿಮತಿಯು ತನ್ನ ಗೆಳತಿಯೊಬ್ಬಳನ್ನು ಕರೆದು ಚಿತಿಯನ್ನು ಸಿದ್ಧ ಪಡಿಸುವಂತೆ ಹೇಳಿದಳು. ಮತ್ತೊಬ್ಬಳನ್ನು ಕರೆದು ಜಾಗ್ರತೆಯಾಗಿ ಸಹ ಗಮನ ಕಾಲದ ಉಡುಪನ್ನು ತರಲು ಆಜ್ಞಾಪಿಸಿದಳು. ಚಿತಿಯು ಸಿದ್ಧ ವಾಯಿತು. ಹಳದಿ ವಸ್ತ್ರವನ್ನುಟ್ಟು ಕಾಂತಿಮತಿಯು ಅಳುತ್ತಿದ್ದ ಗೆಳತಿ ಯರನ್ನು ಸಮಾಧಾನಪಡಿಸಿ ಅವರನ್ನು ಪ್ರಯತ್ನ ಪೂರ್ವಕವಾಗಿ ಅಲ್ಲಿಯೇ ನಿಲ್ಲಿಸಿ ಪತಿಯ ದೇಹವಿದ್ದ ಸ್ಥಳಕ್ಕೆ ಬಂದಳು.

ಅವಳ ಆಶ್ಚರ್ಯಕ್ಕೆ ತಕ್ಕಂತೆ ಅವಳು ಬರುವ ವೇಳೆಗೆ ಸರಿಯಾಗಿ ಪತಿಯ ಪ್ರಾಣನಾಡಿಯು ಮಿಡಿಯುತ್ತಿತ್ತು. ಪೂರ್ಣಭದ್ರನ ಮುಖದಲ್ಲಿ ಗೆಲುವು ಮೂಡಿತ್ತು. ಇಷ್ಟಾದರೂ ಯುವಕನು ಮಂತ್ರವನ್ನು ಜಪಿಸುತ್ತಲೇ ಇದ್ದನು. ನಿಶ್ಚೇತನನಾಗಿ ಬಿದ್ದಿದ್ದ ಕಾಮಪಾಲನು ಅಂಗಗಳನ್ನು ಅಲುಗಾಡಿಸ ತೊಡಗಿದನು. ಕ್ರಮವಾಗಿ ಮುಖದಲ್ಲಿ ಕಾಂತೀಯೇರಿ ಕಣ್ಣಿನ ರೆಪ್ಪೆಗಳು ಬೇರಾಗುವ ಸೂಚನೆಯು ಕಾಣಿಸಿತು. ಅಮಾತ್ಯನು ಕಣ್ಣುಗಳನ್ನು ತೆರೆದನು. ತಲೆಯದೆಸೆಯಲ್ಲಿದ್ದ ಸಹಗಮನ ವೇಷಭೂಷಿತಳಾದ ಹೆಂಡತಿಯನ್ನೂ, ಬಲಭಾಗದಲ್ಲಿದ್ದ ತನ್ನ ಪ್ರತಿ ಬಿಂಬದಂತಿದ್ದ ಯುವಕನನ್ನೂ, ಎಡಗಡೆ ತನ್ನ ಆಪ್ತಮಿತ್ರನಾದ ಪೂರ್ಣಭದ್ರನನ್ನೂ ಕಂಡ ಕಾಮಪಾಲನಿಗೆ ಆಶ್ಚರ್ಯವಾಯಿತು. ವಿಷಯವೇನೆಂದು ಅವನಿಂದ ತಿಳಿಯಲಾಗಲಿಲ್ಲ. ಅವನು ಮೈಮುರಿದು ಎದ್ದು ಕುಳಿತುಕೊಂಡನು. ದರ್ಭೆಗಳನ್ನು ಹಾಸಿದ್ದುದನ್ನು ನೋಡಿ ಮತ್ತಷ್ಟು ಆಶ್ಚರ್ಯಪಟ್ಟನು. ಕಾಂತಿಮತಿಯ ಕಣ್ಣುಗಳಿಂದ ಸಂತೋಷಾಶ್ರುಗಳು ಸುರಿದುಹೋದುವು. ಅವಳಿಗೆ ಏನೊಂದೂ ಮಾತನಾಡ ತೋರಲಿಲ್ಲ. ಗಂಡನ ಕಾಲುಗಳ ಮೇಲೆಬಿದ್ದು 'ಪತಿದೇವ, ಇಂದು ನನ್ನ ಸೌಮಂಗಲ್ಯವನ್ನು ಈ ಯುವಕನು ಉಳಿಸಿಕೊಟ್ಟನು. ನನ್ನ ಪಾಲಿನ ಭಾಗ್ಯದೇವತೆಯಿವನು. ಇಂತಹ ಪರೋಪಕಾರಿಯನ್ನು ಪಡೆದ ತಾಯಿ ಧನ್ಯೆ! ಧನ್ಯೆ!!' ಎಂದಳು.

ಪೂರ್ಣಭದ್ರನ ಆನಂದಕ್ಕೆ ಪಾರವಿರಲಿಲ್ಲ. ಅವನು ಕಾಮಪಾಲನ ಹೆಗಲ ಮೇಲೆ ಕೈಹಾಕಿ 'ಮಿತ್ರ! ನೀನು ಹಿಂದೆ ನಿನ್ನ ಸಾಹಸದಿಂದ ಮೃತ್ಯು ದಾಡೆಯಿಂದ ತಪ್ಪಿಸಿಕೊಂಡು ಬದುಕಿದ ಕತೆಯನ್ನು ಹೇಳಿದ್ದೆಯಲ್ಲವೇ! ಇಂದು ಈ ನಿನ್ನ ಮಗನ ಸಾಹಸದಿಂದ ನೀನು ಮತ್ತೊಂದುಸಲ ಬದುಕಿದುದನ್ನು ನಾನು ಕಣ್ಣಾರೆ ಕಂಡೆನು, ಎಂದು ಹೇಳಿ ಮುಗಿಸುವುದರೊಳಗಾಗಿ ದಂಪತಿಗಳಿಬ್ಬರ ದೃಷ್ಟಿಗಳೂ ಒಟ್ಟಿಗೆ ಯುವಕನ ಮೇಲೆ ಬಿದ್ದುವು. ಅರ್ಥಪಾಲನು ಬಹಳ ನಮ್ರನಾಗಿ ಈರ್ವರಿಗೂ ನಮಸ್ಕರಿಸಿದನು. ಇಬ್ಬರೂ ಆ ಯುವಕನನ್ನು ಎತ್ತಿ ಹಿಡಿದು ಕಣ್ತುಂಬ ನೋಡಿ ದಣಿದರು, ಆಲಿಂಗಿಸಿ ದಣಿದರು; ಮೈದಡವಿ ದಣಿದರು. ಪೂರ್ಣಭದ್ರನು ಯುವಕನ ಚರಿತ್ರೆಯನ್ನೆಲ್ಲಾ ವಿವರಿಸಿ ಆತನು ತಂದೆಯ ಪ್ರಾಣವನ್ನು ಉಳಿಸಿದ ರೀತಿಯನ್ನೂ

ವಿವರಿಸಿದನು. ಯುವಕನು ತನ್ನ ಮೂಲಕ ಹೇಳಿ ಕಳುಹಿಸಿದ್ದಂತೆ ಧೈರ್ಯ ದಿಂದ ಕಾಂತಿಮತಿಯು ಸಹಗಮನಕ್ಕಾಗಿ ಪತಿದೇಹವನ್ನು ಅರಗುವರನಿಂದ ಪಡೆದುದನ್ನೂ ವಿವರಿಸಿ ಆ ಕ್ಷತ್ರಿಯಾಣಿಯ ಧೈರ್ಯಕ್ಕೆ ಮೆಚ್ಚಿದನು.

ಕಾಂತಿಮತಿಯು ಹೊರಹೊಮ್ಮಿದ ವಾತ್ಸಲ್ಯದಿಂದ ಮಗನನ್ನು ಬಳಿಯಲ್ಲಿ ಕೂಡಿಸಿಕೊಂಡು 'ಮಗು, ಹುಟ್ಟಿದ ಕೂಡಲೆ ನಿನ್ನನ್ನು ಪರಿತ್ಯಾಗ ಮಾಡಿದ ಈ ಪಾಪಿಯನ್ನು ಎಂತಹ ಆಪತ್ಕಾಲದಲ್ಲಿ ಬಂದು ಸಲಹಿದೆ! ಇದು ನನ್ನ ಭಾಗ್ಯವಲ್ಲ, ನಿಮ್ಮ ತಂದೆಯ ಭಾಗ್ಯ. ಅವರು ನಿರ್ದೋಷರಾದ್ದರಿಂದ ದೇವರೇ ನಿನ್ನನ್ನು ಬರಮಾಡಿದನು. ದ್ರೋಹವನ್ನೆಸಗದವನಿಗೆ ಕೇಡು ಎಲ್ಲಿಯದು? ಆ ತಾರಾವಳಿಯು ನಿನ್ನ ಆಟಪಾಟಗಳನ್ನು ರಾಣಿಯಾದ ವಸುಮತಿಯು ನೋಡಿ ಆನಂದಿಸುವಂತೆ ಮಾಡಿದಳು. ಹೌದು, ನನ್ನಂತಹ ಮಂದಭಾಗ್ಯಳಿಗೆ ಆ ಬಗೆಯ ಸೌಭಾಗ್ಯವೆಲ್ಲಿ? ಎಂದು ಹೇಳುತ್ತಾ ಸಂತಸದ ಕಣ್ಣೀರಿನಿಂದ ಮಗನನ್ನು ಅಭಿಷೇಕಿಸಿದಳು.

ಯುವಕನು ನಮ್ರನಾಗಿ ಈರ್ವರಿಗೂ ನಮಸ್ಕರಿಸಿದನು. "ನನ್ನ ಸುಕೃತದ ಫಲವು ಇಂದಿಗೆ ಪರಿಪಕ್ವವಾಗಿರಬೇಕು. ತಮ್ಮೀರ್ವರ ಸೇವೆ ಸಲ್ಲಿಸುವ ಭಾಗ್ಯ ನನಗೆ ದೊರೆಯಿತು. ನನ್ನ ಸಾಹಸವೇನು! ಮುಖ್ಯ ದೈವವು ಅನುಕೂಲವಾಗಿತ್ತು; ಅದರಿಂದ ನಾವು ಅಂದು-ಕೊಂಡಂತೆ ಕೆಲಸ ಗಳು ನಡೆದುವು. (ಪೂರ್ಣಭದ್ರನನ್ನು ತೋರಿಸಿ) ಈ ಮಹನೀಯನು ನನಗೆ ಸಿಗದಿದ್ದರೆ ನಾನು ಏನು ತಾನೆ ಮಾಡಲಾಗುತ್ತಿತ್ತು?" ಎಂದು ಹೇಳಿ ಮುಂದೇನು ಮಾಡಬೇಕೆಂಬುದನ್ನು ಬೆಸಸ ಬೇಕೆಂದು ಬೇಡಿದನು.

ಅದಕ್ಕೆ ಕಾಮಪಾಲನು 'ಮಗು, ನಾವೀಗ ಮನೆಗೆ ಹೋಗೋಣ. ಅತಿವಿಶಾಲವಾದ ಆ ಗೃಹದಲ್ಲಿ ಗುಟ್ಟಾಗಿ ಕೆಲವು ಕಾಲ ನಾವಿರಬೇಕು. ಅಲ್ಲಿ ಶೇಖರಿಸಿಟ್ಟಿರುವ ಆಯುಧಗಳು ಯುದ್ಧಕ್ಕೆ ಸಾಕಾಗಬಹುದು. ನಮ್ಮನ್ನು ರಕ್ಷಿಸಿಕೊಳ್ಳುವುದಕ್ಕೆ ತಕ್ಕಷ್ಟು ಅನುಕೂಲಗಳಿವೆ. ಎಷ್ಟೋ ಜನ ಸಾಮಂತ ರಾಜರಿಗೆ ನಾನು ಉಪಕಾರಮಾಡಿದ್ದೇನೆ. ಅವರೆಂದೂ ಕೃತಘ್ನರಾಗ ಲಾರರು. ಪ್ರಜೆಗಳಲ್ಲೂ ಅನೇಕರಿಗೆ ನನ್ನಲ್ಲಿ ನಿರತಿಶಯವಾದ ಪ್ರೀತಿಯಿದೆ. ಸೈನಿಕರೂ ನನ್ನ ಮಾತನ್ನು ಮೀರಲಾರರು. ಈಯೆಲ್ಲ ಸಹಾಯಗಳನ್ನೂ ನಾವು ಉಪಯೋಗಿಸಿಕೊಂಡು ಕೆಲವು ದಿನಗಳಲ್ಲೇ ರಾಜ್ಯದೊಳಗ್ಗೂ

ಹೊರಗೂ ಪ್ರಜಾಕೋಪವನ್ನು ಹುಟ್ಟಿಸಬೇಕು. ಎಲ್ಲ ಕೋಪಗಳಿಗಿಂತ ಪ್ರಜಾಕೋಪವು ಬಲವಾದುದು. ಇವನ ಶತ್ರುಗಳು ಯಾರೆಂಬುದನ್ನೂ ನಾನು ಬಲ್ಲೆ. ಅವರೆಲ್ಲ ಕುಪಿತರಾಗುವಂತೆ ಮಾಡಿ ಅವರನ್ನು ಪ್ರೋತ್ಸಾಹಿಸಿ ಇವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಬೇಕು " ಎಂದನು. ಯುವಕನು ತಂದೆಯ ರಾಜನೀತಿಯುಕ್ತವಾದ ಈ ಮಾತುಗಳನ್ನು ಕೇಳಿ ಬಹಳ ಸಂತೋಷಪಟ್ಟು ಹಾಗೆಯೇ ಆಗಲೆಂದು ಒಪ್ಪಿಕೊಂಡನು.

ಅಲ್ಲಿಂದ ಆ ನಾಲ್ವರೂ ಹೊರಟು ಯಾರಿಗೂ ತಿಳಿಯದಂತೆ ಮನೆಯನ್ನು ಬಂದು ಸೇರಿದರು. ಪಟ್ಟಣದಲ್ಲೆಲ್ಲ ಕಾಮಪಾಲ ದಂಪತಿಗಳು ಸತ್ತು ಹೋದರೆಂದು ವಾರ್ತೆಯು ಹಬ್ಬಿತು. ರಾಜನು ಅಮಾತ್ಯನಾಶದಿಂದ ನಿಶ್ಚಿಂತನಾಗಿದ್ದನು.

೪

ಯಾವ ರಾಜಬೀದಿಯಲ್ಲಿ ನೋಡಿದರೂ ಯುವಕನೂ ಪೂರ್ಣಭದ್ರನೂ ಒಟ್ಟಿಗೆ ಓಡಾಡುತ್ತಿದ್ದರು. ಅನೇಕರು ಪೂರ್ಣಭದ್ರನನ್ನು ಗುರುತು ಹಿಡಿಯಬಹುದಾದರೂ ಆ ಯುವಕನು ಯಾರೆಂಬುದನ್ನು ಮಾತ್ರ ಯಾರೊಬ್ಬರೂ ತಿಳಿಯಲಾಗಲಿಲ್ಲ. ಇವರಿಬ್ಬರ ವಾಸಸ್ಥಳವಾವುದು ? ಇವರ ಜೀವನ ಮಾರ್ಗವೇನು ? ಇವೆಲ್ಲವೂ ಒಂದು ರಹಸ್ಯವಾಗಿತ್ತು.

ಬರಬರುತ್ತ ಪ್ರಜೆಗಳಿಗೆ ಸಿಂಹಘೋಷನಲ್ಲಿ ಆದರವು ಕಡಿಮೆಯಾಗುತ್ತ ಬಂದಿತು. ಅನೇಕ ಸಾಮಂತರಾಜರು ತಾವೇ ಸ್ವತಂತ್ರರಾಗಿ ಕಾಶೀರಾಜನಿಗೆ ವಿರುದ್ಧರಾಗುತ್ತ ಬಂದರು. ಇದೇ ಸಮಯವೆಂದರಿತು ಮೊದಲೇ ಶತ್ರುಗಳಾಗಿದ್ದ ರಾಜರು ಅವನನ್ನು ಹೆದರಿಸಲು ಪ್ರಾರಂಭಿಸಿದರು. ರಾಜನಾದರೂ ಸುಮ್ಮನಿರಲಿಲ್ಲ. ಎಲ್ಲೆಲ್ಲೂ ಗೂಢಚಾರರನ್ನು ನಿಯಮಿಸಿದನು. ತನ್ನ ವಿಷಯದಲ್ಲಿ ಪ್ರಜೆಗಳು ಅನುರಾಗವನ್ನು ತೋರುವಂತೆ ಪ್ರಚಾರಮಾಡಲಾರಂಭಿಸಿದನು. ಆದರೇನು, ವಿರೋಧಿಗಳೇ ಬಲವಾಗಿದ್ದಂತೆ ಕಾಣುತ್ತಿತ್ತು. ಅವನ ಉಪಾಯಗಳಾವುವೂ ಫಲಿಸಲಿಲ್ಲ. ಏನು ಮಾಢಬೇಕೆಂದು ತೋರದೆ ಕರ್ತವ್ಯಮೂಢನಾಗಿ ಅವನು ಉಳಿದನು. ಅವನಿಗೀಗ ತಕ್ಕ ಮಂತ್ರಾ

ಲೋಚನೆ ಹೇಳುವ ಸಮರ್ಥರಾದ ಮಂತ್ರಿಗಳಾರೂ ಇರಲಿಲ್ಲ. ಇದ್ದ ಹಲ ಕೆಲವು ಮಂತ್ರಿಗಳು ಕೇವಲ ಸ್ವಾರ್ಥಪರರಾಗಿ ರಾಜನ ಪಾಲಿಗೆ ದುರ್ಮಂತ್ರಿಗಳಾಗಿದ್ದರು.

ಪೂರ್ಣಭದ್ರನು ಬುದ್ಧಿವಂತನೂ ಸ್ನೇಹಪರನೂ ಆಗಿದ್ದುದರಿಂದ ಎಲ್ಲರಲ್ಲೂ ಬೆರೆತು ಎಲ್ಲ ವಿಷಯಗಳನ್ನೂ ತಿಳಿದು ಬರುತ್ತಿದ್ದನು. ಹೀಗೆ ದಿನಗಳನ್ನು ಕಳೆಯುವುದರಿಂದ ಕಾರ್ಯಸಾಧನೆಯಾಗುವುದಿಲ್ಲವೆಂದು ಅವನು ತಿಳಿದನು. ಏನಾದರೂ ಮಾಡಿ ರಾಜನನ್ನು ಸಜೀವವಾಗಿ ಸೆರೆಹಿಡಿದು ಬುದ್ಧಿ ಕಲಿಸಬೇಕೆಂದು ಅವನು ಬಗೆದನು. ಅರಮನೆಯ ಆಳುಗಳಿಂದ ಅರಸನ ದಿನಚರಿಯನ್ನು ತಿಳಿದುಕೊಂಡನು.

ಒಂದು ದಿನ ಪೂರ್ಣಭದ್ರನು ಸರ್ಪಮುಖವೆಂಬ ಒಂದು ಆಯುಧವನ್ನು ತಂದು ಅರ್ಥಪಾಲನ ಮುಂದಿಟ್ಟು "ಇಂದು ನಾನು ಹೇಳಿದಂತೆ ನೀನು ಕೇಳಬೇಕು" ಎಂದನು.

"ಎಂದು ನಿನ್ನ ಮಾತನ್ನು ಅಲ್ಲಗಳೆದಿದ್ದೇನೆ ?"

"ಎಂದೂ ಮೀರಿಲ್ಲ. ಆದರೂ ಇದು ಸಿದ್ಧಿಯ ಕಾಲ."

"ಯಾವ ಸಿದ್ಧಿ ?"

"ನಿನ್ನ ಜೀವನದ ಗುರಿಯ ಸಿದ್ಧಿ."

ಕೂಡಲೆ ಇಬ್ಬರೂ ಒಂದು ಕೋಣೆಯೊಳಕ್ಕೆ ಹೋದರು. ಪೂರ್ಣಭದ್ರನು ತನ್ನ ನಡುಪಟ್ಟಿಯಿಂದ ಒಂದು ಪತ್ರವನ್ನು ತೆಗೆದು ಅದರಲ್ಲಿ ತೋರಿಸಿದ್ದಂತೆ ಒಂದು ಸುರಂಗವನ್ನು ಆ ಆಯುಧದಿಂದ ಮಾಡ ಹೇಳಿದನು.

ಆ ಕೋಣೆಯ ಮೂಲೆಯಿಂದ ರಾಜನ ಶಯನಗೃಹಕ್ಕೆ ಸುರಂಗವನ್ನು ಮಾಡಬೇಕಾಗಿತ್ತು. ಅದು ಗುಪ್ತವಾಗಿ ಮಾಡಬೇಕಾಗಿದ್ದ ಕೆಲಸವಾದ್ದರಿಂದ ಮತ್ತೊಬ್ಬರನ್ನು ಸಹಾಯಕ್ಕೆ ತೆಗೆದುಕೊಳ್ಳುವಂತಿರಲಿಲ್ಲ. ಯುವಕನೊಬ್ಬನೇ ಬಿಡುವು ಸಿಕ್ಕಿದಾಗಲೆಲ್ಲ ಸುರಂಗಮಾಡುತ್ತಿದ್ದನು.

ಸ್ವಲ್ಪದೂರ ಸುರಂಗವು ನಿರಾತಂಕವಾಗಿ ಸಾಗಿತು. ಯುವಕನು ಹರ್ಷಚಿತ್ತನಾಗಿಯೇ ಕೆಲಸ ಮಾಡುತ್ತಿದ್ದನು. ಇದ್ದಕ್ಕಿದ್ದಂತೆಯೇ ಅವನ ಆಯುಧವು ಕೆಲಸ ಮಾಡದಾಯಿತು. ಅವನು ತನ್ನ ಬಲವನ್ನೆಲ್ಲ ಹಾಕಿ

ಮಣ್ಣನ್ನು ತೆಗೆಯಲು ಯತ್ನಿಸಿದನು. ಆದರೆ ಅಲ್ಲಿ ಮಣ್ಣಿಲ್ಲದೆ ಕಲ್ಲು ಅಡ್ಡ ಸಿಕ್ಕಿದಂತೆ ಇತ್ತು. ಸುರಂಗದ್ವಾರವನ್ನೇ ಮುಚ್ಚಿದ್ದ ಆ ಕಲ್ಲು ಒಂದೇ ಆಗಿರದೆ ಒಂದರಮೇಲೊಂದು ಜೋಡಿಸಿ ಇಟ್ಟದ್ದಂತೆ ತೋರಿತು. ಯುವಕನು ಸ್ವಲ್ಪ ವಿಶಾಲವಾಗಿ ಸುರಂಗವನ್ನು ಮಾಡಿಕೊಂಡು ಅದು ಕಲ್ಲಿನ ಗೋಡೆ ಎಂಬುದನ್ನು ಅರಿತನು. ತಾನು ಅರಮನೆಯ ಗೋಡೆಯನ್ನು ಮುಟ್ಟಿದೆನೆಂದು ಅವನು ತಿಳಿದನು. ಆ ಕಲ್ಲುಗಳ ಮಧ್ಯದಲ್ಲಿದ್ದ ಮಣ್ಣನ್ನೂ ಗಾರೆಯನ್ನೂ ತೆಗೆದುಹಾಕಿದನು. ಮನುಷ್ಯನು ನುಗ್ಗುವುದಕ್ಕೆ ಆಗುವಷ್ಟು ಅವಕಾಶಕೊಡುವ ಹಾಗೆ ಎರಡು ಕಲ್ಲುಗಳನ್ನು ಸಡಿಲಿಸಿ ಅಲುಗಾಡಿಸಿದನು. ಮಹಾಸತ್ತ್ವನಾದ ಅವನಿಗೆ ಅಸಾಧ್ಯವಾದುದು ಏನೂ ಇರಲಿಲ್ಲ. ಕೈಯಲ್ಲಿದ್ದ ಆಯುಧದ ಸಹಾಯದಿಂದಲೇ ಆ ಎರಡು ಕಲ್ಲುಗಳನ್ನೂ ಒಳಕ್ಕೆ ನೂಕಿದನು.

ಹಾಗೆ ಬಿದ್ದ ರಂಧ್ರದ ಮೂಲಕ ತನ್ನ ದೇಹವನ್ನು ಒಳಕ್ಕೆ ಸಾಗಿಸಿದನು. ಅದೊಂದು ವಿಶಾಲವಾದ ಉಪವನವಾಗಿದ್ದಿತು. ಅವನಿಗೆ ತಾನು ಎಲ್ಲಿಗೆ ಬಂದಿದ್ದೇನೆಂಬ ಅರಿವು ಆಗಲಿಲ್ಲ. ಆ ಉಪವನವನ್ನು ನೋಡಿಕೊಂಡು ಬರುತ್ತ ಒಂದು ಅಂತರ್ಗೃಹವನ್ನು ಕಂಡನು. ಸರ್ವಸಂಪತ್ಸಮೃದ್ಧವಾದ ಆ ಮನೆಯನ್ನು ನೋಡಿ ಅವನಿಗೆ ವಿಸ್ಮಯವಾಯಿತು. ಸದ್ದಿಲ್ಲದಂತೆ ಒಳಗೆ ಪ್ರವೇಶಿಸಿದನು. ಸ್ತ್ರೀಯರ ಕಾಲಿನ ಆಭರಣದ ಸದ್ದು ಕೇಳಬಂತು. ಅವನು ಯಾರೋ ಸ್ತ್ರೀಯರು ಇಲ್ಲಿ ವಾಸಿಸುತ್ತಿರಬಹುದೆಂದು ಊಹಿಸಿದನು. ಅವರ ವಿಚಾರವನ್ನು ತಿಳಿಯದೆ ಒಳಗೆ ಪ್ರವೇಶಿಸುವುದು ಯೋಗ್ಯವಲ್ಲವೆಂದು ದೊಡ್ಡದೊಂದು ಸ್ತಂಭದ ಮರೆಯಲ್ಲಿ ನಿಂತನು.

ನಾಲ್ವರು ಸ್ತ್ರೀಯರು ಒಳಗಿನಿಂದ ಬಂದು ಒಂದೆಡೆ ಕುಳಿತರು. ಅವರಲ್ಲಿ ಒಬ್ಬಳು ತಲೆಯಕೂದಲು ನರೆತು ಮುದಿತನಕ್ಕೆ ಆಶ್ರಯ ಕೊಟ್ಟಿದ್ದಳು. ಮತ್ತೊಬ್ಬಳು ಆ ಗುಂಪಿಗೆಲ್ಲ ಶ್ರೇಷ್ಠಳಾಗಿ ಸುಂದರಿಯಾಗಿದ್ದಳು. ಅವಳ ಅವಯವಗಳು ಯೌವನದಿಂದ ತುಂಬಿ ದೇಹವನ್ನು ಮತ್ತಷ್ಟು ಸುಂದರವಾಗಿ ಮಾಡಿದ್ದುವು. ಅವಳಿಗೂ ಸುಮಾರು ಹದಿನೆಂಟು – ಇಪ್ಪತ್ತು ವಯಸ್ಸಿರಬಹುದು. ಅವಳನ್ನು ನೋಡಿದರೆ ರಾಜಪುತ್ರಿಯಂತೆ ಕಾಣುತ್ತಿತ್ತು.

ಉಳಿದ ಇಬ್ಬರು ಅವಳ ಸಂಗಾತಿಯರೆಂದು ಅವರ ಮಾತಿನಿಂದ ತಿಳಿಯಬಹುದಾಗಿತ್ತು.

ರಾಜಪುತ್ರಿಯು ಸಂತೋಷ ಚಿತ್ತಳಾಗಿದ್ದಂತೆ ತೋರುತ್ತಿರಲಿಲ್ಲ. ಅವಳು ಆ ಮುದುಕಿಯನ್ನು ಕುರಿತು "ಅಮ್ಮ, ಈ ಸ್ಥಳಕ್ಕೆ ನಾವು ಬಂದು ಎಷ್ಟು ವರ್ಷಗಳಾದುವು ?" ಎಂದಳು.

"ಸುಮಾರು ಹನ್ನೆರಡು ವರ್ಷಗಳಾಗಿರಬಹುದು."

"ಇದೇನು ಇಲ್ಲಿ ನಮ್ಮ ನಾಲ್ವರ ಹೊರತು ಬೇರೆ ಜನರೇ ಕಾಣುವುದಿಲ್ಲ ?"

"ಇದೊಂದು ನೆಲಮಾಳಿಗೆ. ಯಾವುದೋ ಕಾರ್ಯಕ್ಕಾಗಿ ನಿನ್ನನ್ನು ಇಲ್ಲಿ ಇಟ್ಟಿದ್ದಾರೆ."

"ನಾನು ಯಾರು ?"

"ನೀನು ಯುವರಾಜನಾಗಿದ್ದ ಚಂಡಘೋಷನ ಮಗಳು ಮಣಿಕರ್ಣಿಕೆ."

"ನನ್ನ ತಾಯಿಯೆಲ್ಲಿ ?"

"ನಿನ್ನ ತಾಯಿಯಾದ ಆಚಾರವತಿಯು ಗರ್ಭಿಣಿಯಾಗಿದ್ದಾಗಲೇ ನಿನ್ನ ತಂದೆಯು ತೀರಿಹೋದ್ದರಿಂದ ದುಃಖಪಡುತ್ತಿದ್ದು ನಿನ್ನನ್ನು ಪ್ರಸವಿಸಿ ಆ ನೋವಿನಲ್ಲೇ ಪ್ರಾಣ ಬಿಟ್ಟಳು."

ಸ್ತಂಭದ ಮರೆಯಲ್ಲಿದ್ದ ಯುವಕನು ಅವಳು ರಾಜಪುತ್ರಿಯೆಂಬುದನ್ನರಿತು ಅಲ್ಲಿಂದಲೇ ಇಣಿಕಿ ನೋಡಿದನು. ಅವಳ ಸೌಂದರ್ಯಕ್ಕೆ ಬೆರಗಾದನು.

"ನನ್ನನ್ನು ಅರಮನೆಯಲ್ಲಿ ಬಳೆಸದೆ ಇಲ್ಲಿ ಬಳೆಸುತ್ತಿರುವುದೇಕೆ ?"

"ನಿಮ್ಮ ತಾತನು ಸುಂದರಿಯಾದ ನಿನ್ನನ್ನು ಮಾಲವರಾಜಪುತ್ರನಾದ ದರ್ಪಸಾರನಿಗೆ ಕೊಡಬೇಕೆಂದು ನಿಶ್ಚಯಿಸಿ ಇಲ್ಲಿ ಬಳೆಸುತ್ತಿರುವನು."

"ಅರಮನೆಯಲ್ಲೇ ಏಕೆ ಬಳೆಸಬಾರದಿತ್ತು ?"

"ಅರಮನೆಯಲ್ಲಿ ಬಳೆದ ನಿನ್ನ ತಂದೆಯ ತಂಗಿ ಕಾಂತಿಮತಿಯಂತೆ ಎಲ್ಲಿ ಅನ್ಯರ ಪಾಲಾಗುವೆಯೋ ಎಂದು."

"ದರ್ಪಸಾರನಿಗೆ ನನ್ನನ್ನು ಕೊಟ್ಟು ಮದುವೆ ಮಾಡುವರೇ ?"

"ಅದು ನಿಮ್ಮ ತಾತನ ಇಷ್ಟ. ಆದರೆ ನೀನಿನ್ನೂ ಗರ್ಭದಲ್ಲಿದ್ದಾಗಲೇ ಕಾಂತಿಮತಿಯು ನಿಮ್ಮ ತಾಯಿಯನ್ನು ಪಗಡೆಯಾಟದಲ್ಲಿ ಗೆದ್ದು ಹೆಣ್ಣು ಮಗುವಾದರೆ ತನ್ನ ಮಗನಿಗೇ ಕೊಡಬೇಕೆಂದು ಪಣಮಾಡಿರುವಳು."

"ಆ ನಮ್ಮ ಸೋದರತ್ತೆಯ ಮಗನೆಲ್ಲಿರುವನು ?"

"ಹುಟ್ಟಿದ ಮಗುವನ್ನು ಎಲ್ಲೋ ಬಿಟ್ಟುಬಂದರಂತೆ. ಬದುಕಿರುವನೋ ಇಲ್ಲವೋ ತಿಳಿಯದು."

ಅರ್ಥಪಾಲನು ಮೆಲ್ಲನೆ ಮುಂದಕ್ಕೆ ಸರಿದನು. ಅಪರಿಚಿತ ಪುರುಷನನ್ನು ಕಂಡ ಸ್ತ್ರೀಯರು ಹೆದರಿ ಜಗ್ಗನೆ ಎದ್ದರು. ಅವನವರಿಗೆ ಅಭಯ ಪ್ರದಾನ ಮಾಡಿ "ನೀವು ಹೆದರಬೇಕಾದ್ದಿಲ್ಲ. ಆ ಕಾಂತಿಮತಿಯ ಮಗನೇ ನಾನು" ಎಂದು ಹೇಳಿದನು. ಅವನನ್ನೇ ನಟ್ಟದೃಷ್ಟಿಯಿಂದ ನೋಡುತ್ತಿದ್ದ ರಾಜಕನ್ಯೆಯು ತತ್ ಕ್ಷಣವೇ ನಾಚಿಕೆಯಿಂದ ತಲೆತಗ್ಗಿಸಿದಳು.

ಆಕಾರ ಸಾದೃಶ್ಯದಿಂದ ಆ ಯುವಕನು ಕಾಮಪಾಲನ ಮಗನೆಂದು ಆ ಮುದುಕಿಯು ನಿಶ್ಚಯಿಸಿದಳು. ಅವಳಿಂದಲೇ ಯುವಕನು ಅಲ್ಲಿಂದ ಅರಮನೆಗೆ ಹೋಗುವ ಮಾರ್ಗವನ್ನು ತಿಳಿದನು. ಎರಡು ಅಡಿ ದಪ್ಪವಿರುವ ಗೋಡೆಯ ಮೇಲೆ ಇಟ್ಟಿದ್ದ ಕಲ್ಲನ್ನು ಮೇಲಕ್ಕೆ ಎತ್ತಿದನು. ಆಗ ಸುಮಾರು ಅರ್ಧರಾತ್ರಿಯಿರಬಹುದು. ಆ ಹೆಂಗುಸರು ತೋರಿಸಿದ ದೀಪದ ಬೆಳಕಿನಲ್ಲಿ ರಾಜನ ಶಯನಗೃಹವನ್ನು ಪ್ರವೇಶಿಸಿದನು. ಯಾವ ಆಲೋಚನೆಯೂ ಇಲ್ಲದೆ ಗಾಢನಿದ್ರೆ ಮಾಡುತ್ತಿದ್ದ ಆ ರಾಜನನ್ನು ಕೈನೆರೆ ಹಿಡಿದನು. ಅವನನ್ನು ಮಂಚದಿಂದ ಕೆಳಕ್ಕಿಳಿಸಿ ಅದೇ ಬಿಲದ ಮಾರ್ಗವಾಗಿ ನೆಲಮಾಳಿಗೆಯಲ್ಲಿ ಹೆಂಗುಸರಿದ್ದೆಡೆಗೆ ಕರೆತಂದನು. ಸಿಂಹಘೋಷನು ಭಯದಿಂದ ನಡುಗುತ್ತಿದ್ದನು. ಎಲ್ಲರೂ ಅದೇ ಸುರಂಗಮಾರ್ಗವಾಗಿ ಕಾಮಪಾಲನ ಉಪ್ಪರಿಗೆಗೆ ಬಂದರು. ದುಷ್ಟಭಾವನೆಯಿಂದ ದೂಷಿತನಾಗಿದ್ದ ರಾಜನನ್ನು ತಂದೆಯ ಮುಂದೆ ನಿಲ್ಲಿಸಿ ಅವನ ಅಪ್ಪಣೆಯಂತೆ ಕಬ್ಬಿಣದ ಜೋಡಿಗಳಿಂದ ಅರಸನ ಕಾಲುಗಳನ್ನು ಬಿಗಿದು ಸೆರೆಯಲ್ಲಿಟ್ಟನು.

ನೆಲಮಾಳಿಗೆಯ ಕತೆಯನ್ನು ಕೇಳಿದ ಕಾಂತಿಮತಿಯು ಆನಂದಕ್ಕೆ ಮೇರೆಯಿಲ್ಲವಾಯಿತು. ಆಚಾರವತಿಯ ಮಗಳೇ ತನ್ನ ಸೊಸೆಯಾಗುವಳೆಂದು ಅವಳು ಹಿಗ್ಗಿದಳು. ವಿಧಿವಿಲಾಸವನ್ನು ಬಲ್ಲವರಾರು ? ಮಹಾ

ಸಂಭ್ರಮದಿಂದ ಮದುವೆ ಕಾರ್ಯಗಳು ನೆರವೇರಿದುವು. ರಾಜನಿಲ್ಲದ ಆ ರಾಜ್ಯವು ಕಾಮಪಾಲನ ಪಾಲಾಯಿತು. ಕಾಮಪಾಲನೇ ರಾಜ್ಯಭಾರ ಮಾಡುವನೆಂದು ತಿಳಿದು ಪ್ರಜೆಗಳು ಸಂತೋಷಪಟ್ಟರು. ಅರ್ಥಪಾಲನು ಯುವರಾಜನಾದನು.

ಕಾಂತಿಮತಿಯು ಸಿಂಹಘೋಷನನ್ನು ಬಿಟ್ಟುಬಿಡುವಂತೆ ಸ್ತ್ರೀಸಹಜವಾದ ಕನಿಕರದಿಂದ ಹೇಳಿದಳು. ಆದರೂ ಅರಸನನ್ನು ಬಿಡಲಾಗಲಿಲ್ಲ. ಅವನ ಅವ್ಯವಸ್ಥೆಯ ಆಳಿಕೆಯಿಂದ ಕುಪಿತರಾಗಿದ್ದ ಪ್ರಜೆಗಳು ಅವನನ್ನು ಕೊಲ್ಲವುದಕ್ಕೂ ಹಿಂತೆಗೆಯುತ್ತಿರಲಿಲ್ಲ.

ಈ ವೇಳೆಗೆ ಸರಿಯಾಗಿ ಚಂಡವರ್ಮನು ಅಂಗರಾಜ್ಯದ ಮೇಲೆ ದಂಡೆತ್ತಿ ನಡೆದ ವರ್ತಮಾನವೂ ಬಂತು. ಅಂಗರಾಜನು ಮಗಧರಾಜನ ಮಿತ್ರನಾದ್ದರಿಂದ ಅವನನ್ನು ಶತ್ರುವಿನ ತೆಕ್ಕೆಯಿಂದ ತಪ್ಪಿಸಬೇಕಾದುದು ಅಗತ್ಯವೆಂದು ಆ ತಂದೆ ಮಕ್ಕಳು ಸೈನ್ಯಸಮೇತರಾಗಿ ಅಂಗರಾಜನ ಪ್ರಾರ್ಥನೆಯಂತೆ ಚಂಪಾನಗರಕ್ಕೆ ಬಂದರು. ಅಲ್ಲಿ ಚಂಡವರ್ಮನ ವಧೆಯಾದ ಮೇಲೆ ಮಿತ್ರರಿಂದ ಕೂಡಿದ ರಾಜವಾಹನನ್ನು ಅರ್ಥಪಾಲನೂ ಸೇರಿದನು.

ಗೆಳೆಯನ ಅನಿರೀಕ್ಷಿತ ಸಮಾಗಮದಿಂದ ಹಿಗ್ಗಿದ ಅರ್ಥಪಾಲನು ತನ್ನ ಕತೆಯನ್ನೆಲ್ಲ ಹೇಳಿಕೊಂಡು ಸಿಂಹಘೋಷನನ್ನು ಅವನ ವಶಕ್ಕೆ ಒಪ್ಪಿಸಿದನು. ರಾಜವಾಹನನು ಗೆಳೆಯನ ಸಾಹಸಕ್ಕೆ ಮೆಚ್ಚಿ ಪಶ್ಚಾತ್ತಾಪದಿಂದ ಶುದ್ಧನಾಗಿದ್ದ ಅವನ ಚಿಕ್ಕ ಮಾವನನ್ನು ಸೆರೆಯಿಂದ ಬಿಡಿಸಿ ಅನುಗ್ರಹಿಸಿದನು.

# ಮಂತ್ರಗುಪ್ತ

## ೧

ನಡುರಾತ್ರಿ. ಹಿಮಂತಋತು ಬೇರೆ. ಸಹಿಸಲಾರದಷ್ಟು ಶೈತ್ಯ ಜೊತೆಗೆ. ಅಮಾವಾಸ್ಯೆಯ ಅಂಧಕಾರ. ಆ ಕಗ್ಗತ್ತಲೆಯಲ್ಲಿ ಜಗತ್ತೇ ಶೂನ್ಯವಾಗಿದ್ದಂತೆ ತೋರುತ್ತಿತ್ತು. ಭಯದಿಂದಲೋ ಎಂಬಂತೆ ಜನರ ಸಂಚಾರವೇ ಇರಲಿಲ್ಲ. ಆದರೆ ಕಾಮರೂಪಿಗಳಾದ ಪಿಶಾಚಿಗಳೂ ರಾಕ್ಷಸರೂ ತಮ್ಮ ವಿಹಾರ ಸಮಯವೆಂದು ತಂಡತಂಡವಾಗಿ ಸಂಚಾರ ಹೊರಟಿದ್ದುವು. ಭಯಂಕರವಾದ ಇಂತಹ ಕಾಲವನ್ನೇ ದುರುದ್ದೇಶದ ಕ್ರೂರಿಗಳು ತಮ್ಮಿಷ್ಟ ಸಿದ್ಧಿಗಾಗಿ ಉಪಯೋಗಿಸಿಕೊಳ್ಳುತ್ತಾರಲ್ಲವೆ! ಸರ್ವಭೂತ ಭಯಂಕರವಾದ ಅವರಿಗೆ ಭಯವೆಲ್ಲಿ ಬಂತು ?

ಕಲಿಂಗನಗರದ ಮಸಣಭೂಮಿ. ಎಲ್ಲೆಲ್ಲಿ ನೋಡಿದರೂ ಹೆಣದ ಬೂದಿ. ಸಣ್ಣ ಸಣ್ಣ ಎಲುಕೆಯ ಚೂರುಗಳು. ಅರ್ಧ ಸುಟ್ಟಿರುವ ಹೆಣಗಳು. ಅವುಗಳನ್ನು ಚಿತಿಯಿಂದೀಚೆಗೆ ಎಳೆದು ಉರಿಯಲ್ಲಿ ಹದವಾಗಿ ಬೆಂದಿರುವ ಆ ಬಿಸಿಮಾಂಸವನ್ನು ತಿನ್ನಬಯಸಿ ಚಿತಿಗೆ ಸುತ್ತುಗಟ್ಟಿ ನಿಂತಿರುವ ನರಿಗಳು. ಈ ಭಯಂಕರ ಸನ್ನಿವೇಶವನ್ನೇ ಶಾಂತಮಯವೆಂದು ಭಾವಿಸಿ ಒಬ್ಬ ಜಟಾಧಾರಿಯು ಆ ಮಸಣದ ಒಂದು ಭಾಗದಲ್ಲಿ ಪ್ರಜ್ವಲಿಸುತ್ತಿರುವ ಬೆಂಕಿಯ ಮುಂದೆ ಕುಳಿತಿದ್ದನು. ಅವನ ಕುತ್ತಿಗೆಯು ಎಲುಬಿನ ಚೂರುಗಳಿಂದ ಮಾಡಿದ ಹಾರದಿಂದ ಭಯಂಕರವಾಗಿತ್ತು. ಕೈಯ ಮಣಿಕಟ್ಟುಗಳಲ್ಲಿ ರುದ್ರಾಕ್ಷಿಯ ಬದಲು ಎಲುಬಿನ ಸರವನ್ನು ಸುತ್ತಿದ್ದನು. ಹಣೆಯಲ್ಲೂ, ತೋಳುಗಳಲ್ಲೂ ವಕ್ಷಃಸ್ಥಳದಲ್ಲೂ ಚಿತಾಭಸ್ಮವನ್ನು ತಿರ್ಯಕ್ಪುಂಡ್ರವಾಗಿ ಧರಿಸಿದ್ದನು. ಮುಂದಿರುವ ಬೆಂಕಿಯ ಬೆಂಬೆಳಕಿನಲ್ಲಿ ಆ ಕಪ್ಪುದೇಹದ ಮೇಲೆ ಬೆಳ್ಳಗೆ ತೋರುತ್ತಿದ್ದ ಭಸ್ಮದ ಪಟ್ಟಿಗಳು ವ್ಯಕ್ತವಾಗಿ ತೋರುತ್ತಿದ್ದುವು. ಅವನ ಜಟೆಯು ಕಾರ್ಮೋಡದಂತಿರುವ ಅವನ ದೇಹದಲ್ಲಿ ಸ್ಥಿರವಾದ ಮಿಂಚ

ಬಳ್ಳಿಗಳ ಹುರಿಗಳಂತೆ ಹೊಳೆಯುತ್ತಿದ್ದಿತು. ಆ ಪ್ರದೇಶವನ್ನೆಲ್ಲಾ ಆವರಿಸಿದ್ದ ಕತ್ತಲೆಯನ್ನು ಹೊಡೆದಟ್ಟಲೋ ಎಂಬಂತೆ ಆ ಜಟಾಧರನ ಮುಂದೆ ಪ್ರಜ್ವಲಿಸುತ್ತಿದ್ದ ಬೆಂಕಿಯ ಕುಡಿನಾಲಗೆಗಳು ನಾಲ್ಕು ದಿಕ್ಕುಗಳಿಗೂ ಪ್ರಸರಿಸುತ್ತಿದ್ದುವು. ಕಿಂಕರರು ತಂದಿತ್ತ ಅರಣ್ಯೇಂಧನವನ್ನು ಉದಾರವಾದ ಮನಸ್ಸಿನಿಂದ ಅವನು ಅಗ್ನಿಯ ಪಾಲು ಮಾಡುತ್ತಿದ್ದನು. ಅವನು ತನ್ನ ಬಲಗೈಯಿಂದ ಕಟ್ಟಿಗೆಗಳನ್ನು ಹಾಕುತ್ತಿದ್ದರೂ ಎಡಗೈಯಿಂದ ಹಿಡಿಹಿಡಿ ತೆಗೆದು ಎಳ್ಳು ಬೆರೆತ ಸಾಸುವೆಯನ್ನು ಬೆಂಕಿಯಲ್ಲಿ ಎಸೆಯುತ್ತಿದ್ದನು. ಆ ನಿಶ್ಶಬ್ದವಾದ ಸ್ಮಶಾನದಲ್ಲಿ ಈ ಚಿಟಚಿಟಾ ಶಬ್ದವು ಮಾತ್ರ ಕೇಳಿಬರುತ್ತಿತ್ತು.

ಇವನ ಈ ಕೃತ್ಯಗಳಿಂದಲೇ ಇವನಾವುದೋ ಮಂತ್ರಸಿದ್ಧಿಗಾಗಿ ಹೊರಟಿರುವನೆಂದು ಯಾರಾದರೂ ಸುಲಭವಾಗಿ ಊಹಿಸಬಹುದಾಗಿತ್ತು. ದುರ್ಮಂತ್ರಗಳಿಂದ ದುಷ್ಟ ಪಿಶಾಚಿಗಳನ್ನು ವಶಪಡಿಸಿಕೊಂಡು ತಮ್ಮ ದುರುದ್ದೇಶವನ್ನು ಸಫಲಮಾಡಿಕೊಳ್ಳುವ ದುಷ್ಟರಹೊರತು ಮತ್ತಾರೂ ಇಂತಹ ಕ್ರೂರಕಾರ್ಯಗಳಿಗೆ ಹೊರಡುವುದಿಲ್ಲ. ಈಗಾಗಲೇ ಕೆಲವು ಮಂತ್ರಗಳ ಸಿದ್ಧಿಯನ್ನು ಪಡೆದ ಈ ದುಷ್ಟನು ತನ್ನ ಪಿಶಾಚ ಕಿಂಕರರಿಂದ ಬೇಕಾದ ಕಾರ್ಯಗಳನ್ನು ಮಾಡಿಸುತ್ತಿದ್ದನು. ಇವನ ಕ್ರೂರಸ್ವಭಾವವನ್ನು ಕಂಡ ಪಿಶಾಚಿಗಳಿಗೂ ಬೇಸರ. ತಮ್ಮ ವಿಹಾರಕ್ಕೆ ಅವಕಾಶವನ್ನೇ ಕೊಡದೆ ತಮ್ಮಿಂದ ಕೆಲಸ ಮಾಡಿಸುವ ಈ ದುಷ್ಟ ಮಂತ್ರಜ್ಞನನ್ನು ಯಾವನಾದರೂ ಸಂಹರಿಸಿದರೆ ಸಾಕೆಂದು ಅವು ಬಯಸುತ್ತಿದ್ದುವು. ಬಯಸಿದ ಮಾತ್ರಕ್ಕೇ ಕಾರ್ಯವಾಗುವುದೇ ? ಪ್ರತಿಯೊಂದಕ್ಕೂ ಕಾಲನಿರೀಕ್ಷಣೆ ಬೇಕು. ಕಾಲವು ಒದಗಿಬಂದಾಗ ತಾನಾಗಿಯೇ ಬಯಕೆಯು ಸಿದ್ಧಿಸುವ ಅನುಕೂಲಗಳು ಉತ್ಪನ್ನವಾಗುವುವು. ಹೀಗೆ ಕಾಲನಿರೀಕ್ಷಣೆ ಮಾಡುತ್ತಿದ್ದ ಪಿಶಾಚಿ ಕಿಂಕರರು ಅರೆಮನದಿಂದ ಆ ದುಷ್ಟ ಸಿದ್ಧನ ಸೇವೆ ಮಾಡುತ್ತಿದ್ದುವು.

ಆ ದುಷ್ಟನು ತನ್ನ ಎದುರಿನಲ್ಲಿ ಕೈಮುಗಿದು ನಿಂತಿರುವ ಕಿಂಕರನನ್ನು ಕರೆದು "ಎಲೈ ಪಿಶಾಚಿಯೆ, ನೀನು ಕಾಮರೂಪಿಯಾದ್ದರಿಂದ ಈಗಲೇ ಹೋಗಿ ಈ ಕಲಿಂಗರಾಜನಾದ ಕರ್ದನನ ಮಗಳು ಕನಕಲೇಖೆಯನ್ನು ಅಂತಃಪುರದಿಂದ ಇಲ್ಲಿಗೆ ತೆಗೆದುಕೊಂಡು ಬಾ. ಅದೃಶ್ಯನಾಗಿ ಒಳಹೊಗುವ ಸಾಮರ್ಥ್ಯವುಳ್ಳ ನಿನ್ನನ್ನು ಅಡ್ಡಿಪಡಿಸುವರಾರು ?" ಎಂದನು.

ಈ ದುಷ್ಟಮಾನವನು ಯಾವುದೋ ಮಂತ್ರ ಸಿದ್ಧಿಗಾಗಿ ಇಂತಹ ಭಯಂಕರ ಸಾಧನೆಯನ್ನು ಹೂಡಿದ್ದನು. ಎಷ್ಟೋ ದಿನಗಳಿಂದ ಮಾಡುತ್ತಿದ್ದ ಹೋಮಕ್ಕೆ ಈ ಅಮಾವಾಸ್ಯೆಯ ಅಪರರಾತ್ರಿಯಲ್ಲಿ ಪೂರ್ಣಾಹುತಿಯನ್ನು ಮಾಡಿ, ಸಿದ್ಧಿಯನ್ನು ಪಡೆಯಬೇಕಾಗಿತ್ತು. ಆ ಪೂರ್ಣಾಹುತಿಗೆ ಒಬ್ಬ ರಾಜ ಪುತ್ರಿಯನ್ನೇ ಉಪಯೋಗಿಸಿದಲ್ಲಿ ಮಂತ್ರಸಿದ್ಧಿಯು ಅತಿಶೀಘ್ರವಾಗಿ ಆಗುವು ದೆಂದು ಆ ದುಷ್ಟನು ಕಳಿಂಗರಾಜನ ಏಕಮಾತ್ರ ಪುತ್ರಿಯನ್ನು ಕರೆ ತರಲಾಜ್ಞಾ ಪಿಸಿದ್ದನು. ಪಾಪ! ನಿರಪರಾಧಿಗಳಿಂದ ಪ್ರಾಣಿಗಳ ಪ್ರಾಣಗಳನ್ನಾದರೂ ಬಯಲುಮಾಡಿ ತಮ್ಮ ಬಯಕೆಯನ್ನು ಸಾಧಿಸುವರಲ್ಲವೇ ಕ್ರೂರಿಗಳು! ಇಂತಹ ಕ್ರೂರಿಗಳಲ್ಲವೇ ಸಮಾಜ ಶತ್ರುಗಳು!

ಆಜ್ಞೆಯಾದುದೇ ತಡ. ಕಿಂಕರರು ಆ ನಿಶೀಥದಲ್ಲಿ ರಾಜಪುತ್ರಿಯನ್ನು–ಸುಖವಾಗಿ ನಿದ್ರಿಸುತ್ತಿದ್ದವಳನ್ನು – ಆ ಭಯಂಕರ ಸ್ಮಶಾನಕ್ಕೆ ಒಯ್ದು ತಂದರು. ಆ ಜ್ವಲಿಸುತ್ತಿದ್ದ ಬೆಂಕಿಯ ಶಾಖದಿಂದಲೂ ಮಾಸಲು ಕೆಂಪಾದ ಬೆಳಕಿನಿಂದಲೂ ರಾಜಪುತ್ರಿಯ ನಿದ್ರೆಯು ದೂರವಾಯಿತು. ಎಚ್ಚತ್ತು ಕಣ್ಣು ಬಿಟ್ಟವಳೇ ಆ ದುಷ್ಟನ ಕ್ರೂರ ರೂಪವನ್ನು ನೋಡಿ ಕಿಟ್ಟನೆ ಚೀರಿದಳು. ಆ ಅರಗುವರಿಯು ಎಂದೂ ಕಾಣದಿದ್ದ ಸ್ಮಶಾನ ದೃಶ್ಯವನ್ನು ಕಂಡು ಭಯದಿಂದ ನಡುಗಿದಳು. ಗಾಬರಿಯ ದನಿಯಲ್ಲಿ "ಅಮ್ಮಾ! ಅಪ್ಪಾ!" ಎಂದು ಕಿರಚಿದಳು. ಅವಳ ಆ ದನಿಯು ಯಾರ ಹೃದಯವನ್ನಾ ದರೂ ಕರಗಿಸಬಹುದಾಗಿತ್ತು. ಆದರೆ ಆ ದುಷ್ಟನ ಕಲ್ಲೆದೆಯಲ್ಲಿ ಅದರ ಪರಿಣಾಮವೇನೂ ಆಗಲಿಲ್ಲ. ಅವನು ತಡಮಾಡದೆ ಅವಳನ್ನು ಮುಂದೆಳೆ ದನು. ಅವನು ಎಳೆದ ರಭಸಕ್ಕೆ ಅವಳ ಬಾಡಿದ ಹೂವಿನ ಹಾರವು ಕಿತ್ತು ಹೋಯಿತು. ತಲೆಯಲ್ಲಿ ಮುಡಿದಿದ್ದ ಹೂ ಉದುರಿತು. ಕೂದಲಿನ ಗಂಟು ಬಿಚ್ಚಿಹೋಯಿತು. ಆ ದುಷ್ಟನು ಕೆದರಿದ ಕೂದಲನ್ನೇ ಹಿಡಿದು ಚೂಪಾದ ಕತ್ತಿಯಿಂದ ಅವಳ ತಲೆಯನ್ನು ಕಡಿಯಲು ಕೈಯೆತ್ತಿದನು. ಆ ಸಮಯಕ್ಕೆ ಸರಿಯಾಗಿ ಒಬ್ಬ ಶೂರನಾದ ಯುವಕನು ಬಂದು ಅವನ ಕೈಯಿಂದ ಕತ್ತಿಯನ್ನು ಕಿತ್ತುಕೊಂಡು ಅದೇ ಕತ್ತಿಯಿಂದ ಆ ನೀಚನ ಜಟಾಯುಕ್ತ ವಾದ ತಲೆಯನ್ನು ಕತ್ತರಿಸಿ ಸಮೀಪದಲ್ಲಿದ್ದ ಜೀರ್ಣವೃಕ್ಷದ ಪೊಟರೆಯಲ್ಲಿ ಎಸೆದನು.

ರಾಜಹಂಸನು ಮಗಧದೇಶದ ಅರಸು. ಅವನಿಗೆ ಸುಮಂತ್ರನೆಂಬ ಮಂತ್ರಿಯಿದ್ದನು. ಅವನ ಮಗನಾದ ಮಂತ್ರಗುಪ್ತನು ವಾಮದೇವಾಶ್ರಮದಲ್ಲಿ ರಾಜವಾಹನನೊಂದಿಗೆ ಬಳೆದು ಅವನ ಜೊತೆಯಲ್ಲಿ ತಾನೂ ದಿಗ್ವಿಜಯಕ್ಕೆ ಹೊರಟಿದ್ದನು. ಮಾತಂಗಾಶ್ರಮದಲ್ಲಿ ರಾಜಪುತ್ರನು ಕಣ್ಣಿಗೆ ಕಾಣದೆ ಹೋದಾಗ ಇತರ ಮಂತ್ರಿಕುಮಾರರಂತೆ ಇವನೂ ಆ ರಾಜಪುತ್ರನನ್ನು ಹುಡುಕಿಕೊಂಡು ಹೊರಟನು. ಅಲ್ಲಿ ಇಲ್ಲಿ ಸುತ್ತಾಡುತ್ತಾ ಕಲಿಂಗ ನಗರಕ್ಕೆ ಬಂದನು. ಬಂದವನು ನಗರವನ್ನು ಪ್ರವೇಶಿಸದೆ ನಗರದ ಸಮೀಪದಲ್ಲಿದ್ದ ಬೆಟ್ಟದಲ್ಲಿ ವಾಸಿಸತೊಡಗಿದನು. ಆ ಬೆಟ್ಟದ ತಪ್ಪಲಿನಲ್ಲಿ ಜನರನ್ನು ಸುಡುವ ಸ್ಮಶಾನವಿದ್ದಿತು. ಅದರ ಸುತ್ತ ಹೆಗ್ಗಾಡು. ಆ ಧೀರನಾದ ಮಂತ್ರಿಕುಮಾರನಿಗೆ ಇದೇನೂ ಭಯಂಕರವಾಗಿರಲಿಲ್ಲ. ಮೇಲೆ ಹೇಳಿದ ಘಟನೆಯು ನಡೆದ ದಿನ ಅವನು ಬೆಟ್ಟದ ತಪ್ಪಲಿನಲ್ಲಿ ಒಂದು ಗಿಡದ ಬುಡದಲ್ಲಿ ಎಳೆಯ ಚಿಗುರುಗಳನ್ನು ಹಾಸಿ ಮೆತ್ತನೆಯ ಹಾಸಿಗೆಯನ್ನು ಮಾಡಿಕೊಂಡು ಅದರಲ್ಲಿ ಮಲಗಿದನು. ಆದರೆ ಈ ಕಿಂಕರರ ಗೊಣಗಾಟಗಳಿಂದ ಅವನಿಗೆ ಅಂದು ನಿದ್ರೆಯೇ ಬರಲಿಲ್ಲ. ಇದೇನು? ಈ ನಡುರಾತ್ರಿಯಲ್ಲಿ ಈ ಸ್ಮಶಾನದಲ್ಲಿ ಗದ್ದಲವೆಂದುಕೊಂಡು ಕುತೂಹಲದಿಂದ ಸುತ್ತಾಡುತ್ತ ಬಂದನು. ದುಷ್ಟ ಮಂತ್ರಜ್ಞನ ಚರ್ಯೆಗಳನ್ನೆಲ್ಲಾ ನೋಡುತ್ತಿದ್ದ ಇವನಿಗೆ ಅವನ ಮೇಲೆ ಕೋಪವು ಹೆಚ್ಚಿತು. ರಾಜಪುತ್ರಿಯನ್ನು ಕರೆತಂದು ಏನು ಮಾಡುವನೋ ನೋಡೋಣವೆಂದು ಅವನು ಕಾಯುತ್ತಿದ್ದನು. ಆ ದುಷ್ಟನು ರಾಜಕುಮಾರಿಯ ವಧೆಗೆ ಕೈಯೆತ್ತಿದ ಕೂಡಲೆ ಧೈರ್ಯವಾಗಿ ಮುಂದೆ ನುಗ್ಗಿ ಅವನನ್ನು ಕೊಂದು ಆ ರಾಜಪುತ್ರಿಯನ್ನು ಮಹತ್ತಾದ ವಿಪತ್ತಿನಿಂದ ಪಾರು ಮಾಡಿದನು.

ಕನಕಲೇಖೆಯ ಆನಂದಕ್ಕೆ ಮಿತಿಯುಂಟೇ? ಅರಮನೆಯಲ್ಲಿ ಮಲಗಿದ್ದ ತಾನು ಈ ಮಸಣಭೂಮಿಗೆ ಬಂದುದು ಹೇಗೆಂದು ಅರಿಯದೆ ಆಶ್ಚರ್ಯಗೊಂಡಿದ್ದ ಅವಳಿಗೆ ಆ ನಿರ್ಜನ ಪ್ರದೇಶದಲ್ಲಿ ತನ್ನ ಕೊಲೆಯನ್ನು ತಪ್ಪಿಸಿದ ಆ ಯುವಕನನ್ನು ಕಂಡು ಮತ್ತಷ್ಟು ಆಶ್ಚರ್ಯವಾಯಿತು. ಅವಳೊಂದು ಸಲ ತನ್ನ ಚಂಚಲ ನೋಟದಿಂದ ಯುವಕನನ್ನು ದಿಟ್ಟಿಸಿ ನೋಡಿದಳು. ಅವಳ ನೋಟದಲ್ಲಿ ಭಯದ ಕಾತುರತೆಯು ಹೋಗಿ ಕಾಂತಿ ಮೂಡಿತ್ತು.

ಈ ಯುವಕನು ಯಾರಿರಬಹುದೆಂದವಳು ಮನಸ್ಸಿನಲ್ಲಿಯೇ ಯೋಚಿಸು ತ್ತಿದ್ದಳು.

ಅಷ್ಟರಲ್ಲಿ ಆ ನೀಚನ ವಧೆಯಿಂದ ಸಂತುಷ್ಟನಾದ ಪಿಶಾಚ ಕಿಂಕರನು ಆ ಯುವಕನಿಗೆ ಬಂದು ನಮಸ್ಕರಿಸಿದನು. ಕೈಜೋಡಿಸಿ ನಿಂತು "ಪೂಜ್ಯನೇ, ಈ ದುಷ್ಟನ ತೊಂದರೆಯಿಂದ ಕಣ್ಣಿಗೆ ನಿದ್ರೆಯೇ ಹತ್ತುತ್ತಿರಲಿಲ್ಲ. ಅವನು ನಮ್ಮನ್ನು ಹೆದರಿಸಿ ಗದರಿಸಿ ನಮ್ಮಿಂದ ಮಾಡಬಾರದ ಕೆಲಸಗಳನ್ನು ಮಾಡಿಸುತ್ತಿದ್ದನು. ನಮ್ಮ ಭಾಗದ ಭಾಗ್ಯದೇವತೆಯಂತೆ ನೀನು ಇಂದು ನಮ್ಮನ್ನು ಅವನ ಅಂಕೆಯಿಂದ ತಪ್ಪಿಸಿದೆ. ನೀನು ನಮಗೆ ಮಾತ್ರವಲ್ಲ. ಲೋಕಕ್ಕೇ ಕಲ್ಯಾಣವನ್ನು ಮಾಡಿದೆ. ಇನ್ನೆಷ್ಟು ನಿರಪರಾಧಿಗಳ ಪ್ರಾಣಗಳು ಇವನಿಂದ ಬಲಿಯಾಗಲಿದ್ದುವೋ? ಅವುಗಳನ್ನೆಲ್ಲ ಉಳಿಸಿದೆ. ನಿನ್ನ ಗುಣಕ್ಕೆ ನಾನು ಮಾರುಹೋಗಿದ್ದೇನೆ. ನಿನ್ನಂತಹ ಸತ್ಪುರುಷನ ಸೇವೆ ಯನ್ನು ಸಂತೋಷದಿಂದ ಮಾಡುತ್ತೇನೆ. ಅಪ್ಪಣೆಮಾಡುವುದಕ್ಕೆ ನೀನೇನೂ ಸಂಕೋಚ ಪಡಬೇಕಾದ್ದಿಲ್ಲ" ಎಂದನು.

ಸ್ವಭಾವ ಧೀರನಾದ ಯುವಕನು "ಗೆಳೆಯನೆ, ನಾನಾದರೂ ಮಾಡಿದ ಉಪಕಾರವೇನು? ನನ್ನ ಕರ್ತವ್ಯವನ್ನು ನಾನು ಮಾಡಿದೆ. ಸ್ವಲ್ಪ ಉಪಕಾರ ವಾದರೂ ಮಹೋಪಕಾರವೆಂದು ಬಗೆಯುವುದು ಸಜ್ಜನರ ಸ್ವಭಾವ. ಮರು ಕ್ಷಣದಲ್ಲಿ ತಾವು ಮೃತ್ಯು ಪಾಲಾಗುವುದನ್ನರಿಯದೆ ದುಷ್ಟರು ತಮ್ಮ ಸುಖ ಕ್ಕೆಂದು ಎಷ್ಟೋ ಅಕೃತ್ಯಗಳನ್ನು ಮಾಡುವರು. ಮಿತಿಮೀರಿದ ಪಾಪದ ಫಲವನ್ನು ಇಲ್ಲಿಯೇ ಕೂಡಲೆ ಅವರು ಅನುಭವಿಸುವರು. ನೀನು ನನ್ನ ಮನಸ್ಸಂತೋಷ ಪಡಿಸಲೇಬೇಕೆಂದಿದ್ದಲ್ಲಿ ಆ ನೀಚನಿಂದ ನಿಷ್ಕಾರಣವಾಗಿ ಕ್ಲೇಶಕ್ಕೊಳಗಾದ ಈ ಯುವತಿಯನ್ನು ಎಲ್ಲಿಂದ ಕರೆತಂದೆಯೋ ಅಲ್ಲಿಗೇ ಕರೆದುಕೊಂಡು ಹೋಗಿ ಸೇರಿಸು. ಇದಕ್ಕಿಂತ ನನಗೆ ಬೇರೆ ಯಾವುದೂ ಪ್ರೀತಿಕರವಲ್ಲ" ಎಂದನು.

• ಯುವಕನ ರೂಪು, ಧೈರ್ಯ ಅದಕ್ಕೆ ತಕ್ಕ ಸೌಜನ್ಯ ಇವುಗಳಿಗೆ ಕಲಿಂಗ ರಾಜಪುತ್ರಿಯು ಮನಸೋತಳು. ತನ್ನ ಪ್ರಾಣಗಳನ್ನುಳಿಸಿದ ಆತನನ್ನು ಬಿಟ್ಟು ಒಬ್ಬಳೇ ಹೋಗಲು ಇಷ್ಟಪಡಲಿಲ್ಲ. ಆಗವಳು ಯುವಕನಿಗೆ ತನ್ನ ಕೃತಜ್ಞತೆಯನ್ನು ತೋರುತ್ತ "ಮಹನೀಯನೆ, ಈ ನನ್ನನ್ನು

ಮೃತ್ಯುವಿನ ಕೈಯಿಂದ ರಕ್ಷಿಸಿ ಈಗ ಕೈಬಿಡುವುದು ಉಚಿತವಲ್ಲ. ನನ್ನನ್ನು ನಿನ್ನ ಪಾದ ಧೂಳಿನಂತೆ ಭಾವಿಸಿ ಸೇವಕಳನ್ನಾಗಿ ಮಾಡಿಕೊಂಡು ಅನುಗ್ರಹಿಸಬೇಕು. ಕನ್ಯಾಂತಃಪುರವನ್ನು ಸೇರಿದ ನಿನ್ನನ್ನು ಯಾರೂ ಅರಿಯಲಾರರು. ಅದೂ ಅಲ್ಲದೆ ನನ್ನ ಗೆಳತಿಯರೆಂದೂ ಈ ವಿಷಯವನ್ನು ಪ್ರಕಾಶಪಡಿಸುವುದಿಲ್ಲ" ಎಂದಳು.

ತರುಣನ ಮನಃಸ್ಥೈರ್ಯವು ಚಪಲತೆಗೆಡೆಗೊಟ್ಟಿತು. ಅವನು ಆ ಮುಗ್ಧೆಯ ಪ್ರಾರ್ಥನೆಯನ್ನಂಗೀಕರಿಸಿ ಹೊಸಗೆಳೆಯನಾದ ಕಿಂಕರನ ಸಹಾಯದಿಂದ ಅಂತಃಪುರವನ್ನು ರಾಜಪುತ್ರಿಯೊಡನೆ ಹೊಕ್ಕನು. ಅಲ್ಲಿದ್ದ ಅರಗುವರಿಯ ಸಂಗಾತಿಯರು ನಡೆದ ವೃತ್ತಾಂತವನ್ನು ಕೇಳಿ ತಿಳಿದು ಆ ಧೀರ ತರುಣನ ಸಾಹಸಕ್ಕೆ ಮೆಚ್ಚಿ ಅವನನ್ನು ಸ್ವಾಗತಿಸಿದರು.

ಮಂತ್ರಗುಪ್ತನು ಹೀಗೆ ಕೆಲಕಾಲ ಅಲ್ಲಿ ಸುಖದಿಂದಿದ್ದನು.

## ೨

ಕಲಿಂಗರಾಜ್ಯದರಸು ಕರ್ದನನು ಸ್ವಾಭಾವಿಕವಾಗಿ ಉತ್ಸವ ಪ್ರಿಯನು. ಅವನು ರಾಜ್ಯಭಾರದ ಕೋಟಲೆಗಳನ್ನು ಅಷ್ಟಾಗಿ ಮನಸ್ಸಿಗೆ ತಂದುಕೊಳ್ಳುತ್ತಿರಲಿಲ್ಲ. ಯಾವಾಗಲೂ ಏನಾದರೊಂದು ನೆಪಹೂಡಿ ಉತ್ಸವಗಳನ್ನು ಏರ್ಪಡಿಸುತ್ತಿದ್ದನು. ಉತ್ಸವದ ಆನಂದವನ್ನು ತಾನೊಬ್ಬನೇ ಅನುಭವಿಸದೆ ಪ್ರಜೆಗಳೂ ಅನುಭವಿಸುವಂತೆ ಮಾಡುತ್ತಿದ್ದನು. ಅನೇಕವೇಳೆ ರಾಜಧಾನಿಯನ್ನೇ ಬಿಟ್ಟು ದೂರದ ಪ್ರಕೃತಿರಮ್ಯವಾದ ಸ್ಥಳಗಳಲ್ಲಿ ಈ ಬಗೆಯ ಉತ್ಸವಗಳನ್ನು ಏರ್ಪಡಿಸುತ್ತಿದ್ದುದೂ ಉಂಟು. ಹತ್ತಾರು ದಿನಗಳ ವರೆಗೂ ಇಂತಹ ಉತ್ಸವಗಳು ಕೆಲವು ವೇಳೆ ಮುಂದುವರಿಯುತ್ತಿದ್ದುವು.

ಕಲಿಂಗರಾಜ್ಯವು ಸ್ವಾಭಾವಿಕವಾಗಿ ಸುಂದರವಾದ ಉಪವನಗಳಿಂದ ತುಂಬಿತ್ತು. ಸಮುದ್ರತೀರದ ಕಾಡುಗಳಲ್ಲಿ ತುಂಬು ನೆರಳಿನ ಮಳಲು ಪ್ರದೇಶವು ವಿಲಾಸಿಗಳಿಗೆ ವಿಹಾರ ಸ್ಥಳವಾಗಿತ್ತು. ವಸಂತಋತುವಿನಲ್ಲಿ ಗಿಡಗಳು ಚಿಗುರಿ ವನವು ತನ್ನ ನವೀನತೆಯಿಂದ ಹೊಸವರುಷದ ಒಸಗೆಯನ್ನು ಪ್ರಕೃತಿದೇವಿಗೆ ಒಪ್ಪಿಸುತ್ತಿದ್ದ ಸಮಯ. ಕರ್ದನನು ಈ ಕಾಲವನ್ನು

ಸಾರ್ಥಕಪಡಿಸಿಕೊಳ್ಳಬೇಕೆಂದು ಬಗೆದು ಹದಿಮೂರು ದಿನಗಳು ನಡೆಯಬೇಕಾದ ವನಮಹೋತ್ಸವವೊಂದನ್ನು ಏರ್ಪಡಿಸಿದನು. ಇದಕ್ಕಾಗಿ ಪಟ್ಟಣಿಗರೆಲ್ಲರೂ ತಕ್ಕ ಸಾಧನಗಳಿಂದ ಸಮೀಪದ ಸಮುದ್ರತೀರದ ಕಾಡಿನಲ್ಲಿ ಬಂದು ಬಿಡಾರ ಮಾಡಿದರು. ರಾಜನೂ ಅಂತಃಪುರದ ಸ್ತ್ರೀಯರೊಂದಿಗೆ ಅಲ್ಲಿಗೆ ಬಂದು ತನಗಾಗಿ ಏರ್ಪಟ್ಟಿದ್ದ ಪಟಭವನದಲ್ಲಿ ತಂಗಿದನು. ರಾಜಪುತ್ರಿಯಾದ ಕನಕಲೇಖೆಯೂ ತನ್ನ ಗೆಳತಿಯರೊಂದಿಗೆ ಅಲ್ಲಿಗೆ ಬಂದಿದ್ದಳು. ಪ್ರತಿದಿನವೂ ನಿರಂತರವಾಗಿ ಸಂಗೀತ, ನಾಟ್ಯ, ಹಾಸ್ಯಕ್ರೀಡೆಗಳು ನಡೆದು ಜನರು ವಿಲಾಸಮಗ್ನರಾಗಿದ್ದರು. ರಾಜನೂ ರಾಗಾಂಧನಾಗಿ ಜಗತ್ತನ್ನೇ ಮರೆತು ವಿಹಾರಾಸಕ್ತನಾಗಿದ್ದನು.

ಕಲಿಂಗರಾಜ್ಯದ ಪಕ್ಕದ ರಾಜ್ಯವೇ ಆಂಧ್ರರಾಜ್ಯ. ಕಲಿಂಗದರಸು ವಿಲಾಸಪ್ರಿಯನೆಂದರಿತ ಆಂಧ್ರರಾಜನಾದ ಜಯಸಿಂಹನು ಕರ್ದನನನ್ನು ಕೈಸೆರೆಹಿಡಿಯಲು ಸಮಯ ಕಾಯುತ್ತಿದ್ದನು. ಹದಿಮೂರು ದಿನಗಳ ವನಮಹೋತ್ಸವದ ಘೋಷಣೆಯನ್ನು ಕೇಳಿ ಜಯಸಿಂಹನು ತನ್ನ ಮನೋರಥವನ್ನು ಸಾಧಿಸಲು ಏರ್ಪಡಿಸಿಕೊಂಡನು. ಮಹೋತ್ಸವವು ನಡೆಯುತ್ತಿದ್ದ ಸ್ಥಳವು ಸಮುದ್ರತೀರವಾಗಿದ್ದುದರಿಂದ ಅವನು ಹಡಗು, ದೋಣಿಗಳ ಮೂಲಕ ಸಾಕಷ್ಟು ಸೈನ್ಯವನ್ನು ತಂದು ತೀರದಲ್ಲಿ ಶೇಖರಿಸಿದನು. ವಿಲಾಸಮಗ್ನನಾಗಿದ್ದ ಕಲಿಂಗರಾಜನಿಗೆ ಇದರ ಅರಿವಾಗಲಿಲ್ಲ. ಅವನಲ್ಲಿದ್ದ ಸೈನಿಕರೆಂದರೆ ಹೆಂಗುಸರು, ವಿಲಾಸಿಗಳು. ಅವರಿಂದ ಶತ್ರುಗಳನ್ನು ಎದುರಿಸಲಾದೀತೇ ? ಕ್ಷಣಮಾತ್ರದಲ್ಲಿ ಕರ್ದನನು ತನ್ನ ಪರಿವಾರದೊಂದಿಗೆ ಆಂಧ್ರರಾಜನ ಕೈಸೆರೆ ಸಿಕ್ಕಿಬಿದ್ದನು. ಕಲಿಂಗರಾಜ್ಯವು ಆಂಧ್ರರಾಜನ ಪಾಲಾಯಿತು. ರಾಜರು ವಿಲಾಸಪ್ರಿಯರಾದಲ್ಲಿ ರಾಜ್ಯ ಉಳಿಯುವುದೇ ?

ಜಯಸಿಂಹನು ರಾಜನಾದ ಕರ್ದನನನ್ನೂ ಅವನ ಸ್ತ್ರೀಯರನ್ನೂ ರಾಜಪುತ್ರಿಯಾದ ಕನಕಲೇಖೆಯನ್ನೂ ಸರಿಯಾದ ಕಾಪಿನಲ್ಲಿ ಆಂಧ್ರನಗರಕ್ಕೆ ಕರೆದೊಯ್ದನು. ರಾಜಪುತ್ರಿಯ ರೂಪು ಲಾವಣ್ಯಗಳಿಗೆ ಮನಸೋತು ರಾಜನನ್ನು ಸೆರೆಯಲ್ಲಿಟ್ಟನು. ಕೊಲ್ಲಲು ಅವನ ಮನಸ್ಸೊಪ್ಪಲಿಲ್ಲ. ಹೇಗಾದರೂ ರಾಜಪುತ್ರಿಯ ಮನಸ್ಸೊಲಿಸಿಕೊಳ್ಳಬೇಕೆಂದು ಅವನು ಬಗೆದನು. ಆದರೆ ಅವನ ಇಷ್ಟಾರ್ಥವು ನೆರವೇರಲಿಲ್ಲ. ರಾಜಪುತ್ರಿಯನ್ನವನು ಒಂದು

ಸಲವೇ ನೋಡಿದ್ದುದು. ಮತ್ತೆ ಅವಳನ್ನು ನೋಡಲಾಗಲೇ ಇಲ್ಲ. ಯಾವಾಗ ಅವನು ರಾಜಪುತ್ರಿಯನ್ನು ನೋಡಬಯಸಿದರೂ ಅವಳು ಅವನ ಕಣ್ಣಿಗೆ ಬೀಳದಂತೆ ಆ ಪಿಶಾಚಕಿಂಕರನು ಅವಳನ್ನು ಮರೆಮಾಚುತ್ತಿದ್ದನು. ರಾಜಕುಮಾರಿಗೆ ಪಿಶಾಚಿ ಹಿಡಿದಿದೆಯೆಂದೂ ಅದನ್ನು ಬಿಡಿಸಲು ಮಂತ್ರವಾದಿಗಳ ಸಹಾಯಬೇಕೆಂದೂ ಅವನು ಎಲ್ಲದೇಶಗಳಿಂದಲೂ ಮಂತ್ರವಾದಿಗಳನ್ನು ಬರಮಾಡಿದನು. ಯಾವ ಮಂತ್ರವಾದಿಯಿಂದಲೂ ಆ ಗ್ರಹವನ್ನು ಬಿಡಿಸಲಾಗಲಿಲ್ಲ. ಜಯಸಿಂಹನ ಮನಸ್ಸಿಗೆ ಬಹಳ ಬೇಸರವಾಯಿತು. ಅವನಿಗೆ ಕಲಿಂಗರಾಜ್ಯ ದೊರೆತೂ ಸಂತೋಷವಿರಲಿಲ್ಲ.

೩

ಕಲಿಂಗರಾಜನು ಕೈಸೆರೆ ಸಿಕ್ಕಿದುವನ್ನು ಕೇಳಿ ಮಂತ್ರಗುಪ್ತನು ಬಹಳ ನೊಂದನು. ಅರಗುವರಿಯೂ ಆಂಧ್ರರಾಜನ ಕೈವಶವಾದುದು ಅವನ ನೋವನ್ನು ಇಮ್ಮಡಿಸಿತು. ಆ ಶತ್ರುವಿನ ಕೈಯಿಂದ ಇವರನ್ನು ರಕ್ಷಿಸಬೇಕೆಂದವನು ಆಲೋಚಿಸತೊಡಗಿದನು. ಅವನ ಬಳಿಯಲ್ಲಿ ಆಯುಧಗಳಾಗಲಿ ಸೈನ್ಯವಾಗಲಿ ಇರಲಿಲ್ಲ. ಯಾವಸಹಾಯವೂ ಇಲ್ಲದೆ ಆಂಧ್ರರಾಜನಂತಹ ಪ್ರಬಲನನ್ನು ಗೆಲ್ಲುವುದೆಂತು? ದಿಕ್ಕು ತೋರದೆ ಆ ತರುಣನು ಹುಚ್ಚನಂತೆ ನಗರದ ಸುತ್ತಮುತ್ತ ಅಲೆಯಲಾರಂಭಿಸಿದನು. ಆಂಧ್ರನಗರದ ಕಡೆಯಿಂದ ಯಾರು ಬಂದರೂ ಅವರಿಂದ ಅಲ್ಲಿಯ ವಿಷಯವನ್ನು ಸಂಪೂರ್ಣವಾಗಿ ಕೇಳಿ ತಿಳಿಯುತ್ತಿದ್ದನು.

ಒಂದು ದಿನ ಒಬ್ಬ ಬ್ರಾಹ್ಮಣನು ಆಂಧ್ರನಗರದಿಂದ ಬರುತ್ತಿದ್ದನು. ಅವನ ಸ್ನೇಹವನ್ನು ಸಂಪಾದಿಸಿ ತರುಣನು ಅವನಿಂದ ಜಯಸಿಂಹನ ಮನಸ್ಸಿನ ಬೇಗೆಯನ್ನರಿತನು. ಆ ವಿಪ್ರನ ಮಾತುಗಳಿಂದ ಆಂಧ್ರರಾಜನ ಸಂಕಲ್ಪವೇನೆಂದು ವ್ಯಕ್ತಪಟ್ಟಿತು. ಕನಕಲೇಖೆಯ ಮೈಮೇಲಿದ್ದ ಗ್ರಹವನ್ನು ತಪ್ಪಿಸಲು ಎಂತಹ ಕ್ಷುದ್ರಮಂತ್ರವಾದಿಯು ಏನು ಹೇಳಿದರೂ ಜಯಸಿಂಹನು ಅದರಂತೆ ನಡೆಯಲು ಸಿದ್ಧನಾಗಿರುವನೆಂದು ಕೇಳಿ ಅವನ ಮನಸ್ಸಿನಲ್ಲಿ ಜಯದಾಶೆಯ ಅರುಣೋದಯವಾಯಿತು. ತಾನೂ ಒಬ್ಬ ಮಂತ್ರವಾದಿಯಂತೆ

ಹೋಗಿ ಕಾರ್ಯಸಾಧನೆ ಮಾಡುವುದು ಸರಿಯೆಂದವನು ತೀರ್ಮಾನಿಸಿ ಕೊಂಡನು. ಶತ್ರುವು ಮೋಸಹೋಗುವ ಸಂದರ್ಭವನ್ನರಿತ ಮೇಲೆ ಅವನನ್ನು ಗೆಲ್ಲುವುದೇನು ಕಷ್ಟವಾದೀತು!

ಆ ಸಾಹಸಿಯಾದ ತರುಣನು ಕೂಡಲೆ ತಾನಿಳಿದುಕೊಂಡಿದ್ದ ಸ್ಥಳಕ್ಕೆ ಬಂದನು. ಹಿಂದೆ ತಾನು ಮಂತ್ರವಾದಿಯ ತಲೆಯನ್ನು ಕತ್ತರಿಸಿ ಸ್ಮಶಾನದ ಜೀರ್ಣ ವೃಕ್ಷದ ಪೊಟರೆಯಲ್ಲಿ ಹಾಕಿದ್ದನಷ್ಟೆ. ಅದು ಈಗ ಉಪಯೋಗಕ್ಕೆ ಬಂದಿತೆಂದು ಆನಂದದಿಂದ ಆ ರುಂಡವನ್ನು ತೆಗೆದನು. ಆ ಜಟೆಗಳನ್ನೇ ತೆಗೆದು ಅವುಗಳಿಂದ ತನ್ನ ತಲೆಯನ್ನು ಸಿಂಗರಿಸಿಕೊಂಡನು. ಆ ಮಂತ್ರ ವಾದಿಯ ಹರಕುಬಟ್ಟೆಗಳ ನಿಲುವಂಗಿಯನ್ನು ತಾನೇ ಧರಿಸಿದನು. ಒಂದು ಗೇಣುದ್ದದ ಎಲುಬನ್ನೂ ಒಂದು ತಲೆಬುರುಡೆಯನ್ನೂ ಹಿಡಿದನು. ಅವನ ವೇಷವು ಯಾರಿಗೂ ಸಂದೇಹವನ್ನುಂಟುಮಾಡುವಂತಿರಲಿಲ್ಲ. ನಿಜವಾದ ಮಂತ್ರವಾದಿಯೆಂದೇ ಎಲ್ಲರೂ ಮೋಸಹೋಗುವಂತಿತ್ತು. ಹೀಗೆ ಮಂತ್ರ ವಾದಿಯ ವೇಷಭೂಷಿತನಾದ ಮಂತ್ರಗುಪ್ತನು ಅನೇಕಶಿಷ್ಯರನ್ನು ಪ್ರಚಾರ ಕಾರ್ಯಕ್ಕಾಗಿ ಒದಗಿಸಿಕೊಂಡನು. ಯಾರಕೆಲಸವನ್ನು ಸಾಧಿಸಬೇಕಾ ದರೂ ಸಾಕಷ್ಟು ಪ್ರಚಾರಬೇಕು. ಪ್ರಚಾರವೇ ಇಲ್ಲದಿದ್ದರೆ ಪ್ರಸಿದ್ಧಿಗೆ ಬರುವುದೆಂತು. ಮೊದಲು ತಮ್ಮವರೇ ಕೆಲವರು ಹೊಗಳುತ್ತ ಬಂದರೆ ಆ ಹೊಗಳಿಕೆಗೆ ಮೋಸಹೋಗಿ ಮಿಕ್ಕಜನರೂ ಬಲೆಗೆ ಬೀಳುವರು. ಪ್ರಸಿದ್ಧಿ ಯನ್ನು ಸಂಪಾದಿಸುವ ರಹಸ್ಯವೇ ಇದು. ತರುಣನು ಈ ಗುಟ್ಟನ್ನು ಅರಿತಿದ್ದ ನಾದ್ದರಿಂದ ಶಿಷ್ಯರನ್ನು ತನ್ನವರನ್ನಾಗಿ ಮಾಡಿಕೊಂಡನು.

ಕಲಿಂಗನಗರವನ್ನು ಬಿಟ್ಟು ಪಯಣಹೊರಟನು. ಹೋದಕಡೆ ಗಳಲ್ಲೆಲ್ಲ ಆಶ್ಚರ್ಯಕರವಾದ ಕಾರ್ಯಗಳನ್ನು ಸಾಧಿಸಿ ಜನರ ಮನಸ್ಸನ್ನೊಲಿಸಿ ಕೊಂಡನು. ತಮಗಸಾಧ್ಯವಾದ ಕೆಲಸಗಳನ್ನು ಈ ಮಂತ್ರವಾದಿಯು ಮಾಡಿಕೊಡುತ್ತಿದ್ದುದನ್ನು ಕಂಡ ಜನರು ತಂಡತಂಡವಾಗಿ ಬಂದು ಇವನನ್ನು ಪ್ರಾರ್ಥಿಸಲಾರಂಭಿಸಿದರು. ಹೀಗೆ ಜನರು ಮೋಸಹೋದುದನ್ನರಿತ ತರುಣನು ಅವರಿಂದ ಯಥೇಷ್ಟವಾಗಿ ಆಹಾರ, ಬಟ್ಟೆ ಮತ್ತು ದ್ರವ್ಯಗಳನ್ನು ಸೆಳೆಯ ತೊಡಗಿದನು. ಹಾಗೆ ಜನರಿಂದ ಸಂಪಾದಿಸಿದುದನ್ನು ತನಗಾಗಿ ಸ್ವಲ್ಪವೂ ಇಟ್ಟುಕೊಳ್ಳದೆ ಎಲ್ಲವನ್ನೂ ಶಿಷ್ಯರಿಗೆ ಹಂಚುತ್ತ ಬಂದನು. ಈತನ

ಔದಾರ್ಯವನ್ನು ಕಂಡು ಶಿಷ್ಯರು ತೃಪ್ತರಾಗಿ ಮುಕ್ತಕಂಠದಿಂದ ಮತ್ತಷ್ಟು ಹೊಗಳಲಾರಂಭಿಸಿದರು. ಯಾವ ಊರಿಗೆ ಹೋದರೂ ಅಲ್ಲಿನ ಜನರು ಇವನನ್ನು ಬಿಡುತ್ತಿರಲಿಲ್ಲ. ಜನಾನುರಾಗವನ್ನು ಸಂಪಾದಿಸಿದರೆ ಸಂಪತ್ತು ತಾನಾಗಿಯೇ ಬರುವುದಲ್ಲವೇ!

ಈ ರೀತಿಯಲ್ಲಿ ಊರೂರು ಸುತ್ತಿಕೊಂಡು ಕೆಲವು ದಿನಗಳಲ್ಲಿಯೇ ಈ ವೇಷದ ಮಂತ್ರವಾದಿಯು ಆಂಧ್ರನಗರದ ಸಮೀಪವನ್ನು ಸೇರಿದನು. ಇವನು ನಗರದ ಸಮೀಪಕ್ಕೆ ಬರುವ ಮೊದಲೇ ಇವನ ಕೀರ್ತಿಯು ನಗರ ದೊಳಗೆಲ್ಲ ವ್ಯಾಪಿಸಿತ್ತು. ಪಟ್ಟಣಿಗರನೇಕರು ಅಂತಹ ಮಂತ್ರವಾದಿಯು ನಮ್ಮ ನಗರಕ್ಕೆ ಬಂದಾನೇ ಎಂದು ಹಾರೈಸುತ್ತಿದ್ದರು. ಬಡವರೂ ನೊಂದ ವರೂ ಬಹಳ ಜಾಗ್ರತೆ ಮೋಸಹೋಗುವರಲ್ಲವೇ!

ಬಂದ ಮಂತ್ರವಾದಿಯು ಊರಹೊರಗಿನ ಕೊಳದ ತಡಿಯಲ್ಲಿ ಒಂದು ಗುಡಿಸಲನ್ನು ಹಾಕಿದನು. ಅಲ್ಲಿಯೇ ಶಿಷ್ಯಸಮೇತನಾಗಿ ವಾಸಿಸತೊಡಗಿದನು. ನಗರದ ಜನರಲ್ಲನೇಕರು ಆ ಕೊಳಕ್ಕೆ ಸ್ನಾನಕ್ಕೆಂದು ಬರುತ್ತಿದ್ದರು. ಬಂದ ಜನರ ಮನಸ್ಸನ್ನು ಆಕರ್ಷಿಸುವಂತೆ ಒಂದು ಶಕ್ತಿಯ ಪ್ರತಿಮೆಯನ್ನು ಗುಡಿಸಲಿನ ಮುಂದಿಟ್ಟು ಪೂಜಿಸತೊಡಗಿದನು. ಪಟ್ಟಣಿ ಗರನೇಕರು ಸ್ನಾನಮಾಡಿಬಂದು ಆ ಪ್ರತಿಮೆಗೆ ನಮಸ್ಕರಿಸಿ ತಮ್ಮ ಭಕ್ತಿ ಯನ್ನು ಸೂಚಿಸುತ್ತಿದ್ದರು. ಶಿಷ್ಯರು ಗುಡಿಸಲಿನ ಹೊರಗೆ ಸಾಲುಸಾಲಾಗಿ ಕುಳಿತು ಬಂದ ಜನರನ್ನು ಸ್ವಾಗತಿಸಿ ಅವರ ಭಕ್ತಿಯು ಹೆಚ್ಚುವಂತೆ ಮಂತ್ರ ವಾದಿಯನ್ನು ಹೊಗಳುತ್ತ ಬಂದರು. ಅವನಲ್ಲಿದ್ದ ಮತ್ತು ಇಲ್ಲದ ಅನೇಕ ಗುಣಗಳನ್ನು ಕೊಂಡಾಡುತ್ತಿದ್ದರು. ಇದರಿಂದ ಜನರಲ್ಲಿ ನಂಬುಗೆ ಹೆಚ್ಚಿ ಬರುವ ಜನರ ಸಂಖ್ಯೆಯೂ ಹೆಚ್ಚಿತು. ಶಿಷ್ಯರು ಸುತ್ತಮುತ್ತ ಇರುವ ಊರು ಗಳಿಗೂ ಹೋಗಿ ಅಲ್ಲಿಯೂ ಪ್ರಚಾರಮಾಡುತ್ತ ಬಂದರು. ಹೀಗಾಗಿ ಯಾರ ಬಾಯಿಯಲ್ಲಿ ನೋಡಿದರೂ ಈ ಯತಿಯ ಮಾತೇ!

"ಆಂಧ್ರರಾಜಧಾನಿಯ ಸಮೀಪದ ಕಾಡಿನ ಕೊಳದ ತಡಿಯಲ್ಲಿರುವ ಯತಿಗಳು ಸಾಮಾನ್ಯರಲ್ಲ. ಸರ್ವ ವಿದ್ಯಾಪಾರಂಗತರು. ಅಂಗಸಹಿತವಾದ ಎಲ್ಲ ವೇದಗಳೂ ಅವರಿಗೆ ಬಾಯಿಗೆ ಬರುತ್ತವೆ. ಅವರು ತಿಳಿಯದ ಶಾಸ್ತ್ರ ವಿಲ್ಲ. ಒಂದು ದಿನವಾದರೂ ಅವರು ತಮ್ಮ ಬಾಯಿಯನ್ನು ಸುಳ್ಳು ಹೇಳಿ

ಕೆಡಿಸಿಕೊಂಡವರಲ್ಲ. ದಯೆಯೇ ಮೂರ್ತಿಮತ್ತಾಗಿ ಬಂದಂತಿರುವ ಇವರನ್ನು ಸೇವಿಸಿ ಅನೇಕರು ಯಾವ ವೈದ್ಯರಿಂದಲೂ ಪರಿಹರಿಸಲಾಗದ ಅನೇಕ ದೀರ್ಘ ರೋಗಗಳನ್ನು ಅಲ್ಪಕಾಲದಲ್ಲಿಯೇ ಪರಿಹರಿಸಿಕೊಂಡಿದ್ದಾರೆ. ಅವರ ಹಸ್ತ ದಿಂದ ಹೊರಟ ಮಂತ್ರಾಕ್ಷತೆಗಳು ತಲೆಯಮೇಲೆ ಬೀಳುವುದೇ ತಡ ಸಮಸ್ತ ದುಃಖಗಳೂ ಪರಿಹಾರವಾಗುವುವು. ಆ ಯತಿಗಳ ಪಾದವನ್ನು ತೊಳೆದ ನೀರಿನ ಪ್ರೋಕ್ಷಣೆಯಿಂದ ಅನೇಕ ಕ್ರೂರ ಪಿಶಾಚಿಗಳೂ, ಬ್ರಹ್ಮರಾಕ್ಷಸ ಮೊದಲಾದುವೂ ತತ್‌ಕ್ಷಣವೇ ಬಿಟ್ಟು ಓಡಿಹೋಗುತ್ತಿವೆ. ಯಾವ ಮಂತ್ರ ವಾದಿಯ ಮಂತ್ರಗಳಿಗೂ ನಗ್ಗದ ದುಷ್ಟಗ್ರಹಗಳು ಕ್ಷಣಮಾತ್ರದಲ್ಲಿ ನಮಸ್ಕಾರ ಮಾಡಿ ಓಡಿಹೋಗುತ್ತಿವೆ. ಆ ಯತಿಗಳಿಗೆ ಬಡವರು – ಬಲ್ಲಿದರು, ನಮ್ಮ ವರು – ಇತರರು, ಉತ್ತಮರು – ಅಧಮರು ಜಾತಿಯವರೆಂಬ ಭೇದ ಭಾವನೆಯೇ ಇರುವುದಿಲ್ಲ. 'ಪಂಡಿತಾಃ ಸಮದರ್ಶಿನಃ' ಎಂಬಂತೆ ಎಲ್ಲರನ್ನೂ ಒಂದೇ ಸಮನಾಗಿ ಅನುಗ್ರಹಿಸುತ್ತಿದ್ದಾರೆ. ಇಷ್ಟಾದರೂ ಅವರಿಗೆ ಸ್ವಲ್ಪವಾದರೂ ಅಹಂಕಾರವಿಲ್ಲ. ಯಾರು ಬೇಕಾದರೂ ಸುಲಭವಾಗಿ ಅವರ ಸಂದರ್ಶನವನ್ನು ಪಡೆದು ದುಃಖದಿಂದ ಮುಕ್ತರಾಗಬಹುದು" ಎಂಬ ಸುದ್ದಿಯು ಎಲ್ಲೆಲ್ಲೂ ವ್ಯಾಪಿಸಿತು. ಸ್ವಲ್ಪ ಕಾಲದಲ್ಲಿಯೇ ಆ ಗುಡಿಸಲು ಸಮಸ್ತ ಪಟ್ಟಣಿಗರ ಯಾತ್ರಾಸ್ಥಳವಾಗಿ ಮಾರ್ಪಟ್ಟಿತು.

ಎಲ್ಲ ಜನರ ಬಾಯಿಗೂ ಬಿದ್ದ ಈ ಸಮಾಚಾರವು ಕಾಲಕ್ರಮದಲ್ಲಿ ರಾಜನಾದ ಜಯಸಿಂಹನ ಕಿವಿಗೂ ಬಿದ್ದಿತು. ರಾಜಪುತ್ರಿಯಾದ ಕನಕ ಲೇಖೆಯ ಮೈಮೇಲಿದ್ದ ಗ್ರಹವನ್ನು ಹೊಡೆದೋಡಿಸಬೇಕೆಂದು ರಾತ್ರಿ ಹಗಲೂ ಯೋಚಿಸುತ್ತಿದ್ದ ಅವನಿಗೆ ಈ ಸುದ್ದಿಯನ್ನು ಕೇಳಿದಕೂಡಲೆ ತನ್ನ ಇಷ್ಟಾರ್ಥವು ನೆರವೇರುವ ಸೂಚನೆ ಬಂತು. ತಾನೂ ಹೇಗಾದರೂ ಆ ಯತಿಯ ಅನುಗ್ರಹವನ್ನು ಸಂಪಾದಿಸಬೇಕೆಂದವನು ಯೋಚಿಸಿದನು. ದೂತರ ಮೂಲಕ ಹೇಳಿ ಕಳುಹಿಸಿದರೆ ಯತಿಗಳೆಲ್ಲಿ ಅಹಂಕಾರಿಯೆಂದು ತನ್ನನ್ನು ತಿಳಿಯುವರೋ ಎಂದವನು ತಾನೇ ಪಾದಚಾರಿಯಾಗಿ ಕೊಳದ ತಡಿಗೆ ಬಂದನು. ಶಿಷ್ಯನೊಬ್ಬನನ್ನು ಕರೆದು "ಯತಿಗಳನ್ನು ನೋಡಲವ ಕಾಶ ಉಂಟೇ ?" ಎಂದನು.

ಅದಕ್ಕಾ ಶಿಷ್ಯನು "ರಾಜನೇ, ಯತಿಗಳು ಅನುಷ್ಠಾನಪರರು. ಹಾಗೆ ಅವರನ್ನು ಬಲಾತ್ಕಾರದಿಂದ ಒಲಿಸಿಕೊಳ್ಳಲಾಗುವುದಿಲ್ಲ. ನಿಃಸ್ಪೃಹರಾದ ಅವರು ರಾಜನೆಂದು ಸತ್ಕರಿಸುವರಲ್ಲ. ನೀನು ಪ್ರತಿದಿನವೂ ಬಂದು ಹೆಚ್ಚು ಹೆಚ್ಚು ಭಕ್ತಿಯಿಂದ ಪೂಜಿಸುತ್ತ ಬಾ. ಶಿಷ್ಯರಾದ ನಾವು ನಿನ್ನ ವಿಷಯವನ್ನು ಅವರಲ್ಲಿ ವಿಜ್ಞಾಪಿಸಿಕೊಳುತ್ತ ಬರುತ್ತೇವೆ. ಎಂದವರು ನಿನ್ನನ್ನು ತಾವಾಗಿಯೇ ಬರಮಾಡಿಕೊಳ್ಳುವರೋ ಅಂದೇ ನಿನ್ನ ಆತಂಕವು ಪರಿಹಾರ ವಾಯಿತೆಂದು ತಿಳಿ" ಎಂದನು.

ಇದನ್ನು ಕೇಳಿದ ರಾಜನು ತನ್ನ ಭಕ್ತಿಯಿಂದ ಯತಿಗಳನ್ನೊಲಿಸಿ ಕೊಳ್ಳಬೇಕೆಂದು ಬಗೆದನು. ಪ್ರತಿದಿನವೂ ಬಂದು ತಾನೇ ಗಂಧ ಪುಷ್ಪಾಕ್ಷತೆ ಗಳಿಂದ ದೇವಿಯ ಪ್ರತಿಮೆಯನ್ನು ಪೂಜಿಸುತ್ತ ಬಂದನು. ಶಿಷ್ಯರು ತನ್ನ ವಿಷಯದಲ್ಲಿ ಹೆಚ್ಚು ಮಮತೆಯನ್ನು ತೋರಿಸಲೆಂದು ಅವರಿಗೆ ವಸ್ತ್ರಾಭರಣ ಗಳನ್ನು ಕೊಟ್ಟು ತೃಪ್ತಿಪಡಿಸುತ್ತ ಬಂದನು. ಹೀಗೆ ಕೆಲವು ದಿನಗಳು ಕಳೆದುವು. ಒಂದುದಿನ ಯತಿಯು ಪ್ರಸನ್ನನಾದವನಂತೆ "ಆಂಧ್ರರಾಜ ನನ್ನು ಒಳಗೆ ಬರಮಾಡಿ" ಎಂದನು.

ಶಿಷ್ಯರು ಯತಿಯ ಅಪ್ಪಣೆಯನ್ನು ತಿಳಿಸಿದ ಕೂಡಲೆ ರಾಜನು ಕನಕ ಲೇಖೆಯು ತನ್ನವಳಾದಳೆಂದು ಸಂತೋಷಪಟ್ಟನು. ವಿನೀತನಾಗಿ ಭಕ್ತ ನಂತೆ ಗುಡಿಸಲಿನ ಒಳಹೊಕ್ಕು ಯತಿಗೆ ನಮಸ್ಕರಿಸಿದನು. ಕೈಮುಗಿದು "ಯತಿವರ, ಈ ದಾಸಜನದ ಮನೋರಥವನ್ನು ಸಫಲಗೊಳಿಸಬೇಕು" ಎಂದು ಪ್ರಾರ್ಥಿಸಿದನು. ಮಂತ್ರವಾದಿಯು ಧ್ಯಾನಾಸಕ್ತನಾದವನಂತೆ ನಟಿಸಿ ತನ್ನ ತಪಃಪ್ರಭಾವದಿಂದ ರಾಜನ ಮನೋರತವನ್ನರಿತವನಂತೆ ನಟಿಸುತ್ತಾ ಸ್ವಲ್ಪ ಹೊತ್ತು ಆಲೋಚಿಸಿ ಮಂದಹಾಸದಿಂದ "ಮಗನೇ, ನೀನು ಆ ಕನ್ಯೆ ಯನ್ನು ಮದುವೆಯಾಗಲು ಯತ್ನಿಸುತ್ತಿರುವುದು ಶ್ಲಾಘ್ಯವಾದುದೇ ಸರಿ. ಸಮಸ್ತ ಸಲ್ಲಕ್ಷಣಗಳಿಂದ ತುಂಬಿದ ಆ ಕನ್ಯೆಯನ್ನು ಕೈಹಿಡಿದವನು ಸಮುದ್ರ ರಶನೆಯಾದ ಈ ವಸುಂಧರೆಯ ವಲ್ಲಭನಾಗುವನು. ಆದರೆ ಆ ಕನ್ಯೆಯ ಶರೀರವನ್ನು ಹೊಕ್ಕಿರುವ ಗ್ರಹವು ಯಾವ ಮಂತ್ರವಾದಿಗೂ ಸಗ್ಗತಕ್ಕದ್ದಲ್ಲ. ನಿನ್ನ ಕಣ್ಣಿಗೇ ಏನು, ಯಾವ ಮಂತ್ರವಾದಿಯ ಕಣ್ಣಿಗೂ ಆ ಕನ್ಯೆಯು ಬೀಳದಂತೆ ಆಗ್ರಹವು ಕಾದುಕೊಂಡಿದೆ. ಆದರೆ ನೀನು ಮಾಡುತ್ತಿರುವ

ಭಕ್ತಿಗೆ ನಾನು ಮಾರುಹೋಗಿದ್ದೇನೆ. ಈ ಅಲ್ಪಕೆಲಸವನ್ನಾದರೂ ನಿನಗಾಗಿ ನಾನು ಮಾಡಿಕೊಡದಿದ್ದಲ್ಲಿ ನನ್ನ ಈ ಯತಿಯ ವೇಷದಿಂದೇನು ಪ್ರಯೋಜನ? ಮೂರೇ ಮೂರು ದಿನಗಳು ಸಹಿಸಿಕೊಂಡಿರು. ನಾಲ್ಕನೆಯ ದಿನ ನನ್ನ ವಿದ್ಯೆಯ ಪ್ರಭಾವವನ್ನಾದರೂ ನೋಡುವೆಯಂತೆ" ಎಂದಾಜ್ಞೆ ಯಿತ್ತನು.

ರಾಜನು ತಾನು ಕೃತಕೃತ್ಯನಾದನೆಂದು ಭಾವಿಸಿದನು. ತಾನು ಹೇಳ ದೆಯೇ ಸಕಲ ಸಮಾಚಾರವನ್ನೂ ಧ್ಯಾನದೃಷ್ಟಿಯಿಂದರಿತು ತಿಳಿಸಿದ ಯತಿ ವರನು ಅನುಗ್ರಹಿಸಿದ ಮೇಲೆ ಇಷ್ಟಾರ್ಥವು ದೊರಕದಿರುವುದೇ? ಎಂದವನು ಮನಸ್ಸಿನಲ್ಲಿಯೇ ಸಂತೋಷಪಟ್ಟು "ಗುರುವರ, ತಮ್ಮ ಅನುಗ್ರಹವಿದ್ದರೆ ಸಾಕು. ನನ್ನ ಇಷ್ಟಾರ್ಥವು ನೆರವೇರಿದಂತೆಯೇ ಸರಿ" ಎಂದು ನಮಸ್ಕರಿಸಿದನು.

ಮಂತ್ರಗುಪ್ತನು ಮುಗುಳು ನಗೆಯೊಡನೆ "ಇಷ್ಟಾರ್ಥ ಸಿದ್ಧಿರಸ್ತು" ಎಂದನು.



ದಿವಸಕರನು ತನ್ನ ಚೆಂಗಿರಣಗಳನ್ನು ಸಂಹರಿಸಿಕೊಂಡು ಪಶ್ಚಿಮ ದಿಗಂತದಲ್ಲಿ ಕಾಣದಾದನು. ಕತ್ತಲೆಯು ಎಲ್ಲೆಡೆಯೂ ವ್ಯಾಪಿಸಿತು. ಚಂದ್ರನು ಅಷ್ಟು ಜಾಗ್ರತೆ ಹುಟ್ಟುವ ದಿನಗಳಲ್ಲ. ಆ ಗಾಢಾಂಧಕಾರದಲ್ಲಿ ಗುಡಿಸಲಿನಿಂದ ಒಬ್ಬನೇ ಕೈಯಲ್ಲಿ ಗುದ್ದಲಿ ಮುಂತಾದ ಅಗೆಯುವ ಸಾಧನ ಗಳನ್ನು ಹಿಡಿದು ಈಚೆಗೆ ಬಂದನು. ಶಿಷ್ಯರು ಗಾಢ ನಿದ್ರಾಸಕ್ತರಾಗಿದ್ದಾ ರೆಂಬುದನ್ನರಿತು ಸದ್ದಿಲ್ಲದೆ ಕೊಳದ ತಡಿಗೆ ಬಂದನು. ಮಂತ್ರವಾದಿಯ ವೇಷದ ಮಂತ್ರಗುಪ್ತನು ಕೊಳದ ಪಶ್ಚಿಮದಡದಲ್ಲಿ ಒಂದಾಳುದ್ದ ಹಳ್ಳವನ್ನು ತೋಡಿದನು. ಅಲ್ಲಿದ್ದ ಕಲ್ಲಿಟ್ಟಿಗೆಗಳಿಂದ ಅದನ್ನು ಸುತ್ತುಗಟ್ಟಿ ಕೆಳಗಡೆ ಒಂದು ರಂಧ್ರವನ್ನು ಮಾಡಿ ಕೊಳದೊಳಕ್ಕೆ ಹೋಗಲನುಕೂಲ ಮಾಡಿದನು. ಹೀಗೆ ಮಾಡಿದ ನೀರಿನ ತೊಟ್ಟಿಯನ್ನು ಯಾರೂ ಕಂಡು ಹಿಡಿಯದಂತೆ ಹಿಂದಿನಂತೆಯೇ ಕಲ್ಲಿನಿಂದ ಮುಚ್ಚಿ ಮಣ್ಣನೆಳೆದನು. ಈ ವೇಳೆಗೆ ಬೆಳಗಿನ

ಝಾವವಾಗುತ್ತ ಬಂದುದರಿಂದ ಅದೇ ಕೊಳದಲ್ಲಿ ಸ್ನಾನ ಮಾಡಿ ಪ್ರಾತಃ ಸಂಧ್ಯಾ ಕರ್ಮವನ್ನು ಮುಗಿಸಿ ಅಲ್ಲಿಯೇ ಬೆಳೆದಿದ್ದ ಚೆಂಗಮಲಗಳನ್ನು ಬೊಗಸೆಯಲ್ಲಿ ಹಿಡಿದು ಆಗತಾನೆ ಪ್ರಪಂಚದ ಆಗುಹೋಗುಗಳನ್ನು ಇಣಿಕಿ ನೋಡುವನಂತೆ ಬರುತ್ತಿದ್ದ ದಿನಕರನಿಗೆ ಒಪ್ಪಿಸಿ ತನ್ನ ಆಶ್ರಮಕ್ಕೆ ಹಿಂತಿರುಗಿದನು.

ಅತಿಕಷ್ಟದಿಂದ ಮೂರು ದಿನಗಳನ್ನು ಕಳೆದ ಜಯಸಿಂಹನು ನಾಲ್ಕನೆಯ ದಿನ ಉಚಿತ ಕಾಣಿಕೆಯೊಡನೆ ಯತಿಯ ಸಂದರ್ಶನಕ್ಕೆ ಬಂದನು. ಅವನು ತನ್ನ ಮುಂದಿನ ಸುಖ ಸಾಮ್ರಾಜ್ಯವನ್ನು ಗುಣಾಕಾರ ಹಾಕಿ ಆನಂದದಿಂದ ಉಬ್ಬಿಹೋಗಿದ್ದನು. ಯತಿಯು ತನಗಾಗಿಯೇ ಆ ನಗರಕ್ಕೆ ಬಂದಿದ್ದಂತೆ ತಿಳಿದನು. ಯತಿಯು ರಾಜಪುತ್ರಿಯ ಮೈಮೇಲಿನ ಗ್ರಹವನ್ನು ಓಡಿಸಿ ಬಿಡುವನೆಂಬ ದೃಢವಾದ ನಂಬುಗೆಯಿತ್ತು. ಬಂದ ರಾಜನು ಮಂತ್ರವಾದಿಗೆ ದೀರ್ಘದಂಡ ಪ್ರಣಾಮಮಾಡಿದನು. ಅದಕ್ಕಾ ಯತಿಯು ತನ್ನ ಬಲಗೈಯಿಂದ ಅಭಯಪ್ರದಾನ ಮಾಡಿ ಸಮೀಪದಲ್ಲಿದ್ದ ದರ್ಭಾಸನದಲ್ಲಿ ಕುಳಿತುಕೊಳ್ಳುವಂತೆ ಆಜ್ಞೆಮಾಡಿದನು.

ಜಯಸಿಂಹನು ವಿನಯದಿಂದ "ಯತಿವರ, ತಾವು ಅಪ್ಪಣೆಮಾಡಿದ್ದ ಅವಧಿಯನ್ನು ಅತಿ ಪ್ರಯಾಸದಿಂದ ಕಳೆದುದಾಯಿತು. ಮುಂದೇನು ಮಾಡಬೇಕೆಂಬುದು ಅಪ್ಪಣೆಯಾಗಬೇಕು" ಎಂದನು.

"ನಿನ್ನಿಷ್ಟ ಸಿದ್ಧಿಯ ಉಪಾಯವನ್ನು ಕಂಡಿದ್ದೇನೆ."

"ತಮ್ಮ ತಪಸ್ಸಿಗೂ ದೊರೆಯದ ವಸ್ತುವುಂಟೇ?"

"ಐಶ್ವರ್ಯವು ಯಾವಾಗಲೂ ಅದನ್ನು ಸಂಪಾದಿಸಬೇಕೆಂಬ ಆಶೆಯುಳ್ಳ ಜನಕ್ಕೇ ದೊರೆಯುವುದು."

"ಪ್ರಕೃತಿಯ ನಿಯಮವೇ ಹಾಗಿದೆ. ಸರ್ವಸಾಧನ ಸಮೃದ್ಧವಾದ ಪೃಥಿವಿಯು ಜನತೆಗೆ ಯಾವುದಾದರೊಂದು ಕೊರತೆಯನ್ನು ಇಟ್ಟೇ ಇರುತ್ತದೆ.

"ಎಲ್ಲ ಬಗೆಯ ಶ್ರೇಯಸ್ಸು ಆಲಸ್ಯವಿಲ್ಲದ ಪುರುಷನ ಕರಗತವಾಗುವುದು."

"ಅಲಸನಿಗೆ ಶ್ರೇಯಸ್ಸೆಲ್ಲಿ? ಸುಖವೆಲ್ಲಿ?"

"ನಿನ್ನ ಸದ್ಗುಣ, ಆದರ, ಪೂಜೆಗಳಿಗೆ ಮನಸೋತ ನಾನು ನಿನಗೆ ಸಿದ್ಧಿಯಾಗುವಂತೆ ಈ ಕೊಳವನ್ನು ಶುದ್ಧಿಮಾಡಿದ್ದೇನೆ."

"ಕೊಳದಲ್ಲಿ ಮಾಡಬೇಕಾದುದೇನು ?"

"ನೀನು ಈ ರಾತ್ರಿ ಬಂದು ಕೊಳದಲ್ಲಿ ಕುತ್ತಿಗೆಯ ಉದ್ದ ನೀರಿನಲ್ಲಿ ಇಳಿದು ಸ್ವಲ್ಪ ಹೊತ್ತು ಮೀನುಗಳ ಕಾಟವನ್ನು ಸಹಿಸಿಕೊಂಡು ಮಲಗಿರು."

"ಅಪ್ಪಣೆ."

"ಸ್ವಲ್ಪ ಹೊತ್ತಿನ ಮೇಲೆ ನೀರಿನಲ್ಲಿ ಗುಳಗುಳ ಶಬ್ದವು ನಿನಗೆ ಕೇಳಿ ಬರುವುದು. ಆ ಶಬ್ದವು ನಿಂತ ಮೇಲೆ ನೀನು ಅಲ್ಲಿಂದ ಮೇಲಕ್ಕೆದ್ದು ಬಾ. ಆಗ ನಿನ್ನ ರೂಪವು ಬದಲಾಯಸಿ ನೀನು ಸುಂದರನಾಗಿ ಹೊರಗೆ ಬರುತ್ತೀ. ಆ ನಿನ್ನ ರೂಪವನ್ನು ನೋಡಿ ಗ್ರಹವು ನಿನ್ನೆದುರಿಗೆ ನಿಲ್ಲಲಾರದೆ ಓಡಿ ಹೋಗುವುದು."

"ಆ ರಾಜಪುತ್ರಿಯ ಮನಸ್ಸಿಗೆ........ ..."

"ಆ ರಾಜಪುತ್ರಿಯು ನಿನ್ನ ರೂಪಕ್ಕೆ ಮೋಹಗೊಂಡು ಪ್ರೇಮ ಭರದಿಂದ ಒಂದು ಕ್ಷಣವಾದರೂ ನಿನ್ನನ್ನು ಕಾಣದೆ ಇರಲಾರಳು."

"ಉಪಾಯವು ಅಷ್ಟೇನೂ ಕಠಿಣವಾಗಿಲ್ಲ."

"ನಿನಗೆ ಇಷ್ಟವಿರುವುದಾದರೆ ಮಂತ್ರಿಗಳೊಡನೆ ಆಲೋಚಿಸಿ, ಬೆಸ್ತ ರಿಂದ ಕೊಳದ ಮೀನುಗಳನ್ನು ಹಿಡಿಸಿ, ನಿನ್ನ ಆಪ್ತಜನರಿಂದ ಕೊಳವನ್ನೆಲ್ಲ ಪರಿಶೋಧಿಸಿ, ಯಾರೂ ಬಾರದಂತೆ ಸುತ್ತಲೂ ಸೈನಿಕರ ರಕ್ಷಣೆಯನ್ನೇ ರ್ಪಡಿಸು. ಶತ್ರುಗಳು ಯಾವಾಗ ಏನು ಮಾಡಬಲ್ಲರೋ ತಿಳಿದವರಾರು ?"

"ಹಾಗೆಯೇ ಆಗಲಿ"

"ನೀನು ಒಪ್ಪಿದುದನ್ನು ನನಗೆ ತಿಳಿಸು."

ರಾಜನು ಆನಂದದಿಂದ ಅರಮನೆಗೆ ಹೋದನು. ವಿಶೇಷ ಸಭೆ ಯೊಂದರಲ್ಲಿ ಮಂತ್ರಿಗಳ ಸಲಹೆಯನ್ನು ಹೊಂದಿ ಹಿಂತಿರುಗಿದನು. ಮಂತ್ರ ಗುಪ್ತನು ಅವನ ದೃಢನಿಶ್ಚಯವನ್ನು ನೋಡಿ,

"ರಾಜನೇ, ನಿಮ್ಮ ದೇಶಕ್ಕೆ ಬಂದು ಬಹುದಿನಗಳಾದುವು. ಯತಿಗಳು ಒಂದೇ ಕಡೆ ಅನೇಕ ದಿನಗಳಿರಬಾರದು. ಅದೂ ಅಲ್ಲದೆ ನಿನ್ನ ರಾಜ್ಯದಲ್ಲಿ ಜೀವನವನ್ನು ಸಾಗಿಸಿ ನಿನಗೆ ಒಳ್ಳೆಯದನ್ನು ಮಾಡದೆ ಹೋಗಬಾರದೆಂದು

ಇಷ್ಟು ದಿನಗಳಿದ್ದುದಾಯಿತು. ನನ್ನಿಷ್ಟವೂ ಸಿದ್ಧಿಸಿತು. ನೀನು ಹೋಗಿ ಮಂಗಳ ಸ್ನಾನಮಾಡಿ ಬ್ರಾಹ್ಮಣರನ್ನಾರಾಧಿಸಿ ರಾತ್ರಿ ಸಾವಿರಾರು ಪಂಜಿನ ಬೆಳಕಿನಲ್ಲಿ ನಿನ್ನಿಷ್ಟವನ್ನು ಸಾಧಿಸಿಕೋ. ನಿನಗೆ ಮಂಗಳವಾಗಲಿ" ಎಂದು ನುಡಿದನು.

"ತಾವು ಇಲ್ಲದಿದ್ದ ಮೇಲೆ ಸಿದ್ಧಿಯಾದರೂ ಸಿದ್ಧಿಯಿಲ್ಲದಂತೆಯೇ ಸರಿ. ತಮ್ಮಂತಹ ಏಕಾಂತ ಪ್ರಿಯರನ್ನು ನಾನು ಹೆಚ್ಚು ಒತ್ತಾಯ ಪಡಿಸುವಂತಿಲ್ಲ. ತಮ್ಮಿಷ್ಟದಂತಾಗಲಿ. ಈ ತಮ್ಮ ಶಿಷ್ಯರನ್ನು ನಾನು ನೋಡಿಕೊಳ್ಳುತ್ತೇನೆ" ಎಂದು ವಿನಯದಿಂದ ವಿಜ್ಞಾಪಿಸಿಕೊಂಡನು. ಮಂತ್ರವಾದಿಯ ಆಶೀರ್ವಾದ ವನ್ನು ಪಡೆದು ಮನೆಯನ್ನು ಸೇರಿದನು.

ಯತಿಯ ಶಿಷ್ಯರು ನೃಪತಿಯನ್ನು ಅನುಸರಿಸಿದರು. ಕತ್ತಲಾಯಿತು. ಜನರ ಸಂಚಾರವಿಲ್ಲದ ಆ ಸ್ಥಳದಲ್ಲಿ ಮಂತ್ರಗುಪ್ತನು ಗುಡಿಸಲಿನಿಂದ ಹೊರಟು ಮೊದಲೇ ತಾನು ಮಾಡಿಟ್ಟಿದ್ದ ನೀರಿನ ತೊಟ್ಟಿಯಲ್ಲಿ ಇಳಿದು ಸಣ್ಣರಂಧ್ರದ ಮೂಲಕ ಶಬ್ದವನ್ನು ಕೇಳುತ್ತ ಕುಳಿತನು.

ಮಧ್ಯರಾತ್ರಿ. ರಾಜನು ಹೆಜ್ಜೆಹೆಜ್ಜೆಗೂ ಸೈನಿಕರ ರಕ್ಷಣೆಯನ್ನೇರ್ಪಡಿಸಿ ಕೊಂಡು ಕೊಳವನ್ನು ಮೊದಲೇ ತಿಳಿಸಿದಂತೆ ಶೋಧಿಸಿ ಆನಂದದಿಂದ ನೀರಿ ಗಿಳಿದನು. ಮೇಲೆ ನಿಂತಿದ್ದ ಜನರು ಯತಿಯ ಮಾತು ಸುಳ್ಳೋ ನಿಜವೋ ನೋಡೋಣವೆಂದು ಕುತೂಹಲದಿಂದ ಕಾಯುತ್ತಿದ್ದರು. ರಾಜನು ಕೆಳಗೆ ನೀರಿ ನಲ್ಲಿ ಮಲಗಿದನು. ಸ್ವಲ್ಪ ಹೊತ್ತಿನಲ್ಲಿಯೇ ನೀರು ಕಲಕಿದಂತಾಗಿ ಸುಂದರನಾದ ಯುವಕನೊಬ್ಬನು ನೀರಿನಿಂದ ಹೊರಗೆ ಬಂದನು. ಎಲ್ಲರೂ ರಾಜನೇ ರೂಪಾಂತರ ಹೊಂದಿ ಬಂದನೆಂದು ತಿಳಿದರು. ಮಂತ್ರಗುಪ್ತನು ಜಯಸಿಂಹ ನನ್ನು ಕೊಂದು ಮೊದಲೇ ಮಾಡಿದ್ದ ರಂಧ್ರದ ಮೂಲಕ ಆ ತೊಟ್ಟಿಯಲ್ಲೆ ಸೆದು ತನ್ನ ನಿಜವಾದ ರೂಪದಿಂದ ಈಚೆಗೆ ಬಂದಿದ್ದನು. ಈ ರಹಸ್ಯವನ್ನು ಯಾರೂ ಕಂಡು ಹಿಡಿಯಲಾಗಲಿಲ್ಲ.

ರಾಜನನ್ನು ಸ್ವಾಗತಿಸ ಬಂದ ಸೈನಿಕರೊಂದಿಗೆ ರಾಜಮರ್ಯಾದೆ ಯಿಂದ ಮಂತ್ರಗುಪ್ತನು ಅರಮನೆಯನ್ನು ಸೇರಿದನು. ಆ ಅಪರ ರಾತ್ರಿ ಯಲ್ಲೂ ರಾಜಬೀದಿಗಳು ಹಿಡಿಸಲಾರದಷ್ಟು ಜನಸಂದಣಿ. ರೂಪಾಂತರ ಹೊಂದಿದ ರಾಜನನ್ನು ಕಣ್ಣತುಂಬ ನೋಡಿ ತಣಿಯಬೇಕೆಂದು ಜನರು

ಕಿಕ್ಕಿರಿದು ಸೇರಿದ್ದರು. ಪಟ್ಟಣದ ಮುಖ್ಯಬೀದಿಗಳಲ್ಲೆಲ್ಲ ಹೊರಟ ಮೆರೆವಣಿಗೆಯು ಅರಮನೆಯನ್ನು ಸೇರುವ ವೇಳೆಗೆ ಹೊಂಬೆಳಕಾಗುತ್ತ ಬಂತು. ಅಲಂಕೃತವಾಗಿದ್ದ ಸಿಂಹಾಸನದಲ್ಲಿ ಕುಳಿತು ಆ ತರುಣನು "ತಪಃಪ್ರಭಾವವನ್ನಾದರೂ ನೋಡಿದಿರಾ! ಆ ಯತಿಯ ಅನುಗ್ರಹದಿಂದ ಕೇವಲ ಸ್ನಾನಮಾತ್ರದಿಂದ ನನಗೆ ಹೊಸಹುಟ್ಟು ಬಂದಂತಾಯಿತು. ಮಂತ್ರಬಲದಲ್ಲಿ ನಂಬುಗೆಯಿಲ್ಲದ ನಾಸ್ತಿಕರೀಗ ಏನು ಹೇಳುವರು? ಇಂತಹ ಶುಭಸಮಯದಲ್ಲಿ ದೇವರ ಗುಡಿಗಳಲ್ಲಿ ಪೂಜೆಯು ವಿಶೇಷವಾಗಿ ನಡೆಯಲಿ. ಯಾಚಕರು ಯಾರೂ ನಿರಾಶರಾಗಿ ಹೋಗದಿರಲಿ" ಎಂದಾಜ್ಞೆಯಿತ್ತನು.

ಕೆಲವುದಿನಗಳು ಕಳೆದುವು. ತರುಣನು ಕನಕಲೇಖೆಯ ಗೆಳತಿಯನ್ನು ಬರಮಾಡಿಸಿ ತನ್ನ ಗುರುತನ್ನು ಕೇಳಿದನು. ಮಂತ್ರಗುಪ್ತನೆಂದು ಗುರುತು ಹಿಡಿದ ಅವಳು ಅವನಿಂದ ನಡೆದ ಸಮಾಚಾರವನ್ನೆಲ್ಲ ತಿಳಿದು ರಾಜಪುತ್ರಿಗೆ ತಿಳಿಯ ಹೇಳಿದಳು. ಕನಕಲೇಖೆಯು ತನ್ನ ಪ್ರಿಯನ ಸಾಹಸಕ್ಕೆ ಮೆಚ್ಚಿ ತಂದೆತಾಯಿಗಳಿಗೆ ಈ ವಿಷಯವನ್ನು ತಿಳಿಸಿದಳು. ಕಲಿಂಗರಾಜನಾದ ಕರ್ದನನ ಸಂತೋಷವು ಮಿತಿಮೀರಿತು. ಅಕಾರಣ ಬಂಧುವಾದ ಆ ಯುವಕನನ್ನು ನಿಜಬಂಧುವಾಗಿ ಮಾಡಿಕೊಳ್ಳಲೆಳಸಿ ಶುಭದಿನದಲ್ಲಿ ಕನಕಲೇಖೆಯೊಡನೆ ಕಲಿಂಗರಾಜ್ಯಸಿರಿಯನ್ನೂ ಅವನಿಗೊಪ್ಪಿಸಿದನು. ಹೀಗೆ ಮಂತ್ರಗುಪ್ತನ ಶಾಸನಕ್ಕೊಳಪಟ್ಟು ಕಲಿಂಗ ಆಂಧ್ರದೇಶಗಳೊಂದಾದುವು.

ಗೆಳೆಯನಾದ ರಾಜವಾಹನನನ್ನು ಕಾಣದೆ ಪರಿತಪಿಸುತ್ತಿದ್ದ ಮಂತ್ರಗುಪ್ತನಿಗೆ ರಾಜ್ಯಸುಖಗಳಿಂದ ಮನಸ್ಸಿಗೆ ಶಾಂತಿಯಿರಲಿಲ್ಲ. ಇಷ್ಟರೊಳಗಾಗಿ ಅಂಗರಾಜನಾದ ಸಿಂಹವರ್ಮನು ಸಹಾಯಮಾಡಬೇಕೆಂದು ಪ್ರಾರ್ಥಿಸಿದ್ದನು. ಸೈನ್ಯಸಮೇತನಾಗಿ ಚಂಪಾಪಟ್ಟಣಕ್ಕೆ ಬಂದಿದ್ದ ಮಂತ್ರಗುಪ್ತನು ಅಲ್ಲಿ ರಾಜವಾಹನನನ್ನು ಕಂಡು ಆನಂದಿಸಿದನು. ಬಹುದಿನಗಳಮೇಲೆ ಮಿಳಿತರಾದ ಗೆಳೆಯರು ಪರಸ್ಪರ ಕುಶಲಪ್ರಶ್ನೆಮಾಡಿದರು. ರಾಜವಾಹನನು ಗೆಳೆಯನ ಕತೆಯನ್ನು ಕೇಳಿ "ಅದ್ಭುತವಾದ ಋಷಿಚರ್ಯೆ! ಅಪೂರ್ವವಾದ ತಪಃಫಲ! ಪರಿಹಾಸವಿರಲಿ, ಬುದ್ಧಿ, ಬಲಗಳ ಸ್ವರೂಪವೇನೆಂದು ತಿಳಿದೆನು" ಎಂದು ಗೆಳೆಯನನ್ನಾಲಿಂಗಿಸಿಕೊಂಡನು.

———

## ಇದೇ ಗ್ರಂಥಕರ್ತರಿಂದ ರಚಿತವಾಗಿ ಹೊರಬೀಳಲಿರುವ ಪುಸ್ತಕಗಳು

೧. ರಾಯರ ಅಳಿಯ (ಐತಿಹಾಸಿಕ ಕಾದಂಬರಿ)

೨. ಮೇಘಪ್ರತಿ ಸಂದೇಶ (ಕಥಾವಳಿ)

೩. ವಿದ್ಯಾಧರ ,,

೪. ಮಹಾಕವಿ ದಂಡಿಯ ಕತೆಗಳು (ಭಾಗ ೨)

**ಭಾ ರ ತೀ ಶ ಅ ಡ್ ಕೊ**

“ಭಾರತೀಶ ಭವನ”

ರಾಘವೇಂದ್ರಕಾಲೊನಿ :: ಬೆಂಗಳೂರು 2.

———

Printed at the 'Sree Sathyanarayana Press,' Bangalore 2.